श्रीमदानन्दतीर्थभगवत्पादाचार्यविरचितः

# तन्त्रसारसङ्ग्रहः

(व्याख्याचतुष्टयोपेतः)




गौरवसम्पादकः - डा. सत्यध्यानाचार्यः कट्टि

निदेशकः, द्वैतवेदान्ताध्ययनसंशोधनप्रतिष्ठानम्

सम्पादकः - डा. प्रह्लादाचार्यः जोशि

प्राध्यापकः, श्रीजयतीर्थविद्यापीठम् बेङ्गळूरु

प्रकाशकाः - द्वैतवेदान्ताध्ययनसंशोधनप्रतिष्ठानम्, बेङ्गळूरु - 4

श्रीमदानन्दतीर्थभगवत्पादाचार्यविरचितः

# तन्त्रसारसङ्ग्रहः

छलारी शेषाचार्यकृततन्त्रसारार्थसङ्ग्रहाख्यव्याख्यया,
श्रीरघुनाथतीर्थविरचिततत्त्वकणिकया, वेङ्कटपत्याचार्यविरचितगुर्वर्थदीधित्या,
मङ्गाली धर्माचार्यविरचितटीकया च समलङ्कृतः

गौरवसम्पादकः

**डा. सत्यध्यानाचार्यः कट्टि**

निदेशकः, द्वैतवेदान्ताध्ययनसंशोधनप्रतिष्ठानम्

सम्पादकः

**डा. प्रह्लादाचार्यः जोशि**

प्राध्यापकः, श्रीजयतीर्थविद्यापीठम् बेङ्गळूरु

***This Volume is published with the grant from the Govt. of Karnataka***

**2017**



**प्रकाशकः**

द्वैतवेदान्ताध्ययनसंशोधनप्रतिष्ठानम्, बेङ्गळूरु- ४

तन्त्रसारसङ्ग्रहः

**Tantrasārasaṅgraha** of Śrī Ānandatīrtha with the commentaries of Tantrasārārthasaṅgraha by Śrī Chalārī Śeṣāchārya, Tatwakaṇikā by Śrī Raghunāthatīrtha, Gurvarthadīdhiti by Śrī Venkatapathyāchārya and Tantrasārārthasaṅgraha tīkā by Śrī Mankālī Dharmāchārya. Honorary Editor : Dr. Satyadhyanacharya Katti, edited by Dr. Prahladacharya Joshi. Published by **Dvaita Vedanta Studies and Research Foundation**, No.11, Uttaradi Matha Road, Basavanagudi, Bangalore-560 004.

No. of Pages : lxiv+958

Price : Rs. 500/-



ISBN No.: 978-93-83679-50-8

Cover Design : K.M. Sheshagiri

Printed by :**Vāgartha,** B'lore-19.
vagartha@yahoo.com

।। श्री दिग्विजयरामो विजयते ।।

श्रीमज्जगद्गुरु श्रीमध्वाचार्य मूलमहासंस्थानम्

# उ त्त रा दि म ठः

श्रीमदुत्तरादिमठाधीशाः

श्री श्री १००८ श्री सत्यात्मतीर्थश्रीपादाः

## अनुग्रहसन्देशः



परमकारुणिकः परमात्मा समेषां सज्जनानां वाञ्छितार्थप्राप्तये सप्तकोटिमहामन्त्रानुपदिदेश । न तान् सर्वान् जप्तुं सर्वे प्रभवन्ति । अतः संसिद्धसप्तकोटिमहामन्त्राः श्रीमदानन्दतीर्थभगवत्पादाचार्यास्तेषु मन्त्रेषु सारभूतान् द्वासप्ततिसंख्याकानष्टसङ्ख्याकांश्च मन्त्रान् स्वीये तन्त्रसारसङ्ग्रहे उपदिदिशुः । सर्वाभीष्टदाः सर्वारिष्टनिवारकाश्चैते मन्त्राः । भगवतः षोडशोपचारपूजाविधानं होम-तदङ्गस्थण्डिलादिविधानं चक्राब्जादिमण्डलक्रममर्चानिर्माणप्रकारं देवालयनिर्माणप्रकारं च प्रत्यपीपदत्राचार्यवर्यः । साधकानामत्यन्तं साधकानिमान् विषयान् साधयन्तमिमं ग्रन्थचिन्तामणिं प्रबोद्धुं न वयं पारयामो विना टिप्पणीसहायमिति निश्चप्रचम् । तदिदमवगत्य द्वैतवेदान्तसंशोधनप्रतिष्ठानतः टिप्पणीचतुष्टयोपेतस्तन्त्रसारसङ्ग्रहः प्रकाश्यमानो वर्तत इति महदिदं प्रमोदस्थानं भाग्यपदं च । छलारी शेषाचार्यकृता, श्रीरघुनाथयतिकृता, वेङ्कटपत्याचार्यकृता, मङ्गाली धर्माचार्यकृता चेति चतस्रः टिप्पण्यस्तत्र राराजन्ते ।।

तस्यैतस्य ग्रन्थस्य सम्पादनं अस्मत्प्रियशिष्येण गुत्तलाचार्यलब्धवैदान्तिकविद्येन विदुषा प्रह्लादाचार्येण कृतमस्ति । सम्यक् शोधयित्वा तत्र तत्र पादटिप्पणीभिः संयोज्य महता

परिश्रमेण कृतमिदं कार्यं सानन्दं श्लाघयामः । अभिनन्दामहे द्वैतवेदान्तप्रतिष्ठनपदाधिकारिणः । श्रीजयतीर्थविद्यापीठे प्राध्यापकः वाक्यार्थपटुः नैकग्रन्थलेखकः संशोधकोऽनुवादकश्चायं विद्यावारिधि(पि.हेच् डि)पदवीधरः प्रह्लादाचार्यः जोशीत्युपाह्वः एवमेव निरन्तरां वाङ्मयीं सेवां वितनोत्विति तथा ज्ञानभक्तिविरक्तिभाजनं च भूयदिति सम्प्रार्थयामहे श्रीमूलसीतासमेत-श्रीमूलरामदिग्विजयरामवेदव्यासवंशरामप्रसन्नविठ्ठलान् ॥

इति नारायणस्मरणानि

श्रीमत्सत्यात्मतीर्थ श्रीपादङ्गळवरु
उत्तरादिमठ

# ನಿರ್ದೇಶಕರ ನುಡಿ

**ಕಸ್ತಂತ್ರಸಾರಂ ಸಂಪ್ರಾಪ್ಯ ನ ಸ್ಯಾತ್ ಪರ್ಯಾಪ್ತವಾಂಛಿತಃ ।**
**ಅಮರ್ತ್ಯೈರಾಶ್ರಿತಚ್ಛಾಯಂ ಕಲ್ಪದ್ರುಮಮಿವೋತ್ತಮಮ್ ॥**

ಎಂದು ಸುಮಧ್ವವಿಜಯದಲ್ಲಿ ಪಂಡಿತಾಚಾರ್ಯರು ಆಚಾರ್ಯರ ಗ್ರಂಥಗಳನ್ನು ವರ್ಣನೆ ಮಾಡುವ ಸಂದರ್ಭದಲ್ಲಿ ತಂತ್ರಸಾರಸಂಗ್ರಹದ ಬಗ್ಗೆ 'ತಂತ್ರಸಾರವನ್ನು ಹೊಂದಿದ ಪುರುಷನ ಬಯಕೆಯು ಸಿದ್ಧಿಸದೇ ಉಳಿದೀತೇ! ಈ ತಂತ್ರಸಾರಸಂಗ್ರಹವು ದೇವಲೋಕದ ಕಲ್ಪದ್ರುಮದಂತಿದೆ' ಎಂದು ವರ್ಣಿಸಿದ್ದಾರೆ.

ಸಾಕ್ಷಾನ್ಮೂಲರೂಪಿವಿಷ್ಣುವಿನಿಂದ ರಚಿತವಾದ ತಂತ್ರಸಾರದ ಸಂಗ್ರಹವನ್ನು ಕಲಿಕಾಲದ ಸಾಧಕಜೀವರ ಯೋಗ್ಯತೆಯನ್ನು ಕಂಡು ಸಂಗ್ರಹಿಸಿದ್ದಾರೆ. ನಾಲ್ಕು ಅಧ್ಯಾಯಗಳನ್ನೊಳಗೊಂಡ ಈ ಗ್ರಂಥದಲ್ಲಿ ಮೊದಲನೇಯ ಅಧ್ಯಾಯದಲ್ಲಿ ಅಷ್ಟಮಹಾಂತ್ರಗಳ ಅಭಿವ್ಯಕ್ತಿ, ತದ್ವಾಚ್ಯರೂಪಗಳ ಧ್ಯಾನ, ವಿಸ್ತೃತವಾದ ಭಗವಂತನ ಪೂಜೆ, ಪೀಠಪೂಜೆ ಇತ್ಯಾದಿಗಳನ್ನು, ದ್ವಿತೀಯಾಧ್ಯಾಯದಲ್ಲಿ ಹೋಮೋಪಯುಕ್ತ ಕುಂಡ-ದ್ರವ್ಯಾದಿಗಳನ್ನು, ತೃತೀಯಾಧ್ಯಾಯದಲ್ಲಿ ಪ್ರತಿಮಾಲಕ್ಷಣ, ಪ್ರತಿಮಾನಿರ್ಮಾಣಕ್ರಮ, ದೇವಾಲಯನಿರ್ಮಾಣಕ್ರಮ, ಪ್ರತಿಷ್ಠಾವಿಧಿ ಮುಂತಾದ ವಿಷಯ ಗಳನ್ನು, ಚತುರ್ಥಾಧ್ಯಾಯದಲ್ಲಿ ವರಾಹಾದಿವಿಷ್ಣುಂತ್ರಗಳನ್ನು, ಲಕ್ಷ್ಮೀ, ವಾಯು, ಗರುಡಾದಿಮಂತ್ರಗಳನ್ನು ಅಂಗನ್ಯಾಸಕರನ್ಯಾಸ ಧ್ಯಾನಸಹಿತವಾಗಿ ವಿವರಿಸಿದ್ದಾರೆ.

**'ಪ್ರಣಾವದ್ಯಶೇಷಮಂತ್ರೋದ್ಧಾರಕಾಣಾಂ'** ಎಂದು ಶ್ರೀರಾಘವೇಂದ್ರತೀರ್ಥರು ಪ್ರಾತಃ ಸಂಕಲ್ಪ – ಗದ್ಯದಲ್ಲಿ ಹೇಳುವಂತೆ ಪ್ರಣವವೇ ಮೊದಲಾದ ಎಲ್ಲ ವಿಷ್ಣು ಹಾಗು ಅನ್ಯದೇವತಾ ಮಂತ್ರಗಳನ್ನು ತಂತ್ರಸಾರದಿಂದ ಸಂಗ್ರಹಿಸಿ ಆಚಾರ್ಯರು ಸಾಧಕರಿಗೆ ಕೊಟ್ಟದ್ದು ಪರಮಾನುಗ್ರಹವೇ ಸರಿ.

'ಆಚಾರ್ಯರು ಕೇವಲ ವಿಷ್ಣುವಿಗೆ ಪ್ರಾಶಸ್ತ್ಯವನ್ನು ನೀಡಿ ಉಳಿದ ಯಾವ ದೇವತೆಗಳನ್ನೂ ಸಹ ಪೂಜಿಸುವಂತಿಲ್ಲ' ಎಂದು ಸಾಮಾನ್ಯವಾಗಿ ಶ್ರೀಮದಾಚಾರ್ಯರ ಮೇಲೆ ಅಪವಾದ ನುಡಿಯುಂಟು. ಬಹುಶಃ ಆಚಾರ್ಯರ ತಂತ್ರಸಾರಸಂಗ್ರಹಕೃತಿಯನ್ನು ನೋಡದೆ ಈ ಆಕ್ಷೇಪವನ್ನು ಕೆಲವರು ಮಾಡಿರುವರು. ಆಚಾರ್ಯರು ವಿಷ್ಣುವಿಗೆ ಸರ್ವೋತ್ತಮತ್ವವನ್ನು ಪ್ರತಿಪಾದಿಸಿರುವರೆ ವಿನಹ ಇನ್ನುಳಿದ ಶಿವಾದಿಗಳನ್ನು ಪೂಜಿಸುವಂತಿಲ್ಲ ಎಂದು ಎಲ್ಲಿಯೂ ಹೇಳಿಲ್ಲ. ಈ ತಂತ್ರಸಾರಸಂಗ್ರಹದಲ್ಲಿ ಶಿವ, ಪಾರ್ವತಿ, ಗರುಡ, ಶೇಷ, ಗಣಪತಿ, ಯಮಾದಿ ಅಷ್ಟದಿಕ್ಪಾಲಕರ ಮಂತ್ರಗಳನ್ನು ಉದ್ಧರಿಸಿ ಶಿವಾದಿಗಳ ಪೂಜೆಯನ್ನು ಅವರ ಮಂತ್ರಜಪವನ್ನು ವಿಧಿಸಿರುವರು. ಶಿವಾದಿದೇವತೆಗಳ ಅನುಗ್ರಹ-ಪ್ರೀತಿಯು ಸಾಧಕರಿಗೆ ಇರಲಿ ಎಂದು ಆಚಾರ್ಯರು ಭಕ್ತರಿಗೆ ಕರುಣಿಸಿರುವರು.

ಇಂಥಹ ಪರಮ ಪವಿತ್ರವಾದ ಕಲ್ಪವೃಕ್ಷ ಕಾಮಧೇನುವಿನಂತಿರುವ ತಂತ್ರಸಾರಸಂಗ್ರಹದ ಪಾರಾಯಣ ಅಧ್ಯಯನಗಳನ್ನು, ಅರ್ಥಾನುಸಂಧಾನಪೂರ್ವಕವಾಗಿ ಮಾಡಿದಾಗ ಎಲ್ಲ ಇಷ್ಟಾರ್ಥ ಗಳು ಪೂರ್ಣವಾಗುವದರಲ್ಲಿ ಸಂದೇಹವಿಲ್ಲ. ಆಚಾರ್ಯರ ಈ ಗ್ರಂಥಕ್ಕೆ ಟೀಕಾಚಾರ್ಯರ ಪದ್ಯಮಾಲಾವು ತಂತ್ರಸಾರಸಂಗ್ರಹದ ಪ್ರಥಮಾಧ್ಯಾಯದಲ್ಲಿ ಹೇಳಿದ ದೇವಪೂಜೆಯನ್ನು

**ಪೂಜ್ಯಶ್ಚ ಭಗವಾನ್ನಿತ್ಯಂ ಇತ್ಯಧ್ಯಾಯೇ ಯಥಾಕ್ರಮಃ ।**
**ಶ್ರೀಮಧ್ವಗುರಣಾ ಪ್ರೋಕ್ತಃ ಪೀಠಾವರಣಪೂಜನೇ ॥**
**ಸೂತ್ರತ್ವಾತ್ ತಸ್ಯ ಬೋಧಾರ್ಥಂ ಕ್ವಚಿದ್ವಕ್ಷ್ಯಾಮಿ ವಿಸ್ತರಮ್ ।**

ಎಂದು ವಿಸ್ತರಿಸಿರುವರು. ಆಚಾರ್ಯರ ತಂತ್ರಸಾರಸಂಗ್ರಹಗ್ರಂಥವು ಸೂತ್ರಪ್ರಾಯವಾದ್ದರಿಂದ ಕೆಲವು ಸ್ಥಳದಲ್ಲಿ ಟೀಕಾಕೃತ್ಪಾದರು ವಿವರಿಸಿದ್ದಾರೆ. ಈ ಪದ್ಯಮಾಲಾವು ಒಂದರ್ಥದಲ್ಲಿ ತಂತ್ರಸಾರಸಂಗ್ರದ ವ್ಯಾಖ್ಯಾನರೂಪವಾಗಿದೆ. ಅದಲ್ಲದೇ ವ್ಯಾಸತೀರ್ಥಾದಿ ಅನೇಕ ಮಹನೀಯರು ಈ ತಂತ್ರಸಾರಸಂಗ್ರಹಕ್ಕೆ ವ್ಯಾಖ್ಯಾನವನ್ನು ಮಾಡಿರುರು.

ಪ್ರಕೃತ, ಶ್ರೀರಘುನಾಥತೀರ್ಥರ ತತ್ತ್ವಕಣಿಕಾ, ಛಲಾರಿ ಆಚಾರ್ಯರ ತಂತ್ರಸಾರಾರ್ಥಸಂಗ್ರಹ, ಬಿದರಹಳ್ಳಿ ವೇಂಕಟಪತ್ಯಾಚಾರ್ಯರ ಗುರ್ವರ್ಥದೀಧಿತಿ, ಮಂಕಾಲಿ ಧರ್ಮಾಚಾರ್ಯರ ವ್ಯಾಖ್ಯಾನ ಎಂಬ ನಾಲ್ಕು ವ್ಯಾಖ್ಯಾನಗಳನ್ನೊಳಗೊಂಡ ಈ ಕೃತಿಯ ಪ್ರಕಾಶನವನ್ನು ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಪ್ರತಿಷ್ಠಾನವವು ಕೈಗೆತ್ತುಕೊಂಡಿದೆ. ಒಬ್ಬೊಬ್ಬ ವ್ಯಾಖ್ಯಾನಕಾರರು ತಮ್ಮದೇ ಆದ ಶೈಲಿಯಲ್ಲಿ ತಂತ್ರಸಾರಸಂಗ್ರಹವನ್ನು ವ್ಯಾಖ್ಯಾನಿಸಿದ್ದಾರೆ. ಕೆಲವರು ಮಂತ್ರದ ಅರ್ಥದ ಬಗ್ಗೆ, ಕೆಲವರು ಮಂಡಲದ ವಿಷಯದಲ್ಲಿ, ಕೆಲವರು ಮಂತ್ರೋದ್ಧಾರದ ವಿಷಯದಲ್ಲಿ ಅನೇಕ ತಂತ್ರಗ್ರಂಥಗಳ, ಪಂಚರಾತ್ರಾದಿ ಪ್ರಮಾಣಗಳನ್ನು ಉದಾಹರಿಸಿ ವ್ಯಾಖ್ಯಾನಿಸಿದ್ದಾರೆ. ಇದರಲ್ಲಿ ತತ್ತ್ವಕಣಿಕಾ, ಛಲಾರಿ, ಗುರ್ವರ್ಥದೀಧಿತಿ ವ್ಯಾಖ್ಯಾನಗಳು ಕೆಲವು ಸಂಸ್ಥೆಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಮುದ್ರಿತವಾಗಿವೆ. ಮಂಕಾಲಿ ಧರ್ಮಾಚಾರ್ಯರ ವ್ಯಾಖ್ಯಾನವು ಮುದ್ರಿತವಾಗಿಲ್ಲ. ಓದುಗರ ಹಾಗೂ ವಿಮರ್ಶಕರ ಅನುಕೂಲಕ್ಕಾಗಿ ಆ ಎಲ್ಲ ವ್ಯಾಖ್ಯಾನಗಳನ್ನು ಏಕತ್ರ ಸಂಗ್ರಹಿಸಿ ಪ್ರಕೃತ ಮುದ್ರಿಸಲಾಗುತ್ತಿದೆ.

ಈ ಗ್ರಂಥದ ಸಂಪಾದನ ಕಾರ್ಯವನ್ನು ನಮ್ಮವರೇ ಆದ ಶ್ರೀಜಯತೀರ್ಥವಿದ್ಯಾಪೀಠದ ಅಧ್ಯಾಪಕರಾದ ಡಾ. ಪ್ರಹ್ಲಾದಾಚಾರ್ಯ ಜೋಶಿಯವರು ಕೈಗೆತ್ತಿಕೊಂಡಿದ್ದಾರೆ. ಪ್ರಹ್ಲಾದಾಚಾರ್ಯರು ವಿದ್ಯಾರ್ಥಿಗಳಿದ್ದಾಗಲೇ ಶ್ರೀಮನ್ನ್ಯಾಯಸುಧಾದಿಗ್ರಂಥಗಳ ಪರೀಕ್ಷೆಯನ್ನು ಅತ್ಯುತ್ತಮರೀತಿಯಿಂದ ನೀಡಿ ಶ್ರೀಪಾದಂಗಳವರ ವಿದ್ವಾಂಸರ ಅನುಗ್ರಹಕ್ಕೆ ಮೆಚ್ಚುಗೆಗೆ ಪಾತ್ರರಾದವರು. ಪ್ರಸ್ತುತ ಶ್ರೀಜಯತೀರ್ಥವಿದ್ಯಾಪೀಠದಲ್ಲಿ ನ್ಯಾಯ-ವೇದಾಂತ ಉದ್ಗ್ರಂಥಗಳ ಪಾಠಮಾಡುತ್ತ ಅನೇಕ ಪುಸ್ತಕಗಳ ಅನುವಾದ ಹಾಗೂ ಸಂಪಾದನೆಯ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ. ಕೆಲವೇ ದಿವಸಗಳ ಹಿಂದೆ ಶ್ರೀಮಟ್ಟೀಕಾಕೃತ್ಪಾದರ ಸ್ವತಂತ್ರಕೃತಿಯಾದ ಪ್ರಮಾಣಪದ್ಧತಿಯನ್ನು ಅನೇಕ ಟಿಪ್ಪಣಿಗಳ ಸಾರವನ್ನು ಒಳಗೊಂಡಂತೆ ಕನ್ನಡದಲ್ಲಿ ಅನುವಾದಿಸಿದ್ದಾರೆ. ಪ್ರಹ್ಲಾದಾಚಾರ್ಯ ಈ ಕಾರ್ಯವನ್ನು ಅಭಿನಂದಿಸುತ್ತ ಇನ್ನೂ ಹೆಚ್ಚಿನ ಸಂಶೋಧನ ಕಾರ್ಯವು ಇವರಿಂದ ನಡೆಯಲಿ ಎಂದು ಹರಿವಾಯುಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

**ಡಾ. ಸತ್ಯಧ್ಯಾನಾಚಾರ್ಯ ಕಟ್ಟಿ**
ನಿರ್ದೇಶಕರು, ದ್ವೈತವೇದಾಂತಾಧ್ಯನ ಮತ್ತು
ಸಂಶೋಧನ ಪ್ರತಿಷ್ಠಾನ

# ಭೂಮಿಕಾ

## ಭಾರತೀಯಪರಂಪರೆಯಲ್ಲಿ ತಂತ್ರಶಾಸ್ತ್ರ

ಜಗತ್ತಿನಾದ್ಯಂತ ಪ್ರಾಚೀನಭಾರತದ ಋಷಿಮುನಿಪ್ರಣೀತವಾದ ವೈದಿಕ ವಿಚಾರಧಾರೆಗೆ ಅನಿತರಸಾಧಾರಣವಾದ ಮಹತ್ತ್ವವು ಇದೆ. ವೈದಿಕತಂತ್ರವನ್ನು ಸಾಕ್ಷಾತ್ಕರಿಸಿಕೊಂಡ ಮುನಿಜನರು ಕೇವಲ ಪಾರತ್ರಿಕ ಲೋಕದ ಪ್ರಾಪ್ತಿಗಾಗಿ ಪ್ರಯತ್ನಿಸಲಿಲ್ಲ. ಕಿಂತು ಅದಕ್ಕನುಗುಣವಾದ ಸರ್ವಪ್ರಾಣಿಗಳಿಗೂ ಹಿತಕರವಾದ ಶಾಸ್ತ್ರವನ್ನು ರಚಿಸಿ ಸಾಧನ ಪದ್ಧತಿಯನ್ನು ಉದ್ದೀಪನ ಗೊಳಿಸಿದರು. ಅದು 'ತಂತ್ರಶಾಸ್ತ್ರ' ಎಂದು ಲೋಕದಲ್ಲಿ ಪ್ರಸಿದ್ಧಿಯನ್ನು ಪಡೆಯಿತು. ಋಷಿಮುನಿಪ್ರಣೀತವಾದ ತಂತ್ರಶಾಸ್ತ್ರಕ್ಕೆ ಮೂಲವಾದದ್ದು ಮೂಲರೂಪಿವಿಷ್ಣುವಿನಿಂದ ರಚಿತವಾದ ತಂತ್ರಗ್ರಂಥ. ಇದು ಇಂದು ಉಪಲಬ್ಧವಾಗದಿರುವುದು ನಮ್ಮ ದುರ್ದೈವ.

ಭಾರತದ ಪ್ರಾಚೀನಶಾಸ್ತ್ರಗಳಲ್ಲಿ ತಂತ್ರಶಾಸ್ತ್ರವು ಅನ್ಯತಮ. ನಮ್ಮ ಪ್ರಾಚೀನರ ಅಲೌಕಿಕ ಬುದ್ಧಿಗೆ, ಅಪ್ರತಿಮವಾದ ಸಿದ್ಧಿಗೆ, ಅಪೂರ್ವವಾದ ತತ್ತ್ವಾನ್ವೇಷಣೆಗೆ ನಿದರ್ಶನವಾದ ಶಾಸ್ತ್ರವೇ ತಂತ್ರಶಾಸ್ತ್ರ. ತತ್ತ್ವಜ್ಞಾನ ಜಪತಪಯೋಗಸಿದ್ಧಿಗಳನ್ನು ಕರಗತ ಮಾಡಿಕೊಳ್ಳುವುದಕ್ಕೆ ಸಾಧನವಾದ ಶಾಸ್ತ್ರ ತಂತ್ರಶಾಸ್ತ್ರ. ಇದರ ಬಗ್ಗೆ ಪ್ರಾಚೀನರಿಗೆ ಇದ್ದ ಶ್ರದ್ಧೆಯು ಅಪಾರ ಅಸದೃಶ. ತಂತ್ರದಿಂದ ಸಿದ್ಧಿಯನ್ನು ಪಡೆಯಲು ಪಟ್ಟ ಪರಿಶ್ರಮವೂ ಅಪಾರ ಅಸದೃಶ. ಅದರಿಂದ ಪಡೆದ ಸಿದ್ಧಿಯೂ ಅಂಥದ್ದು.

ಋಷಿಮುನಿಗಳ ಯೋಗಸಿದ್ಧಿಯು ತಂತ್ರಶಾಸ್ತ್ರದ ಅನುಷ್ಠಾನದ ಫಲವಾಗಿದೆ. ತಂತ್ರಶಾಸ್ತ್ರವೂ ಸಹ ಮೂಲತಃ ತತ್ತ್ವಜ್ಞಾನದ ಅಡಿಪಾಯದಲ್ಲಿಯೇ ಬೆಳೆದು ತತ್ತ್ವಜ್ಞಾನವನ್ನು ಪ್ರಚುರ ಪಡಿಸುತ್ತದೆ. ತತ್ವಜ್ಞಾನವನ್ನು ಸಾಧಿಸುವ ಬಗೆ, ತತ್ತ್ವಜ್ಞಾನವನ್ನು ಸಂಪಾದಿಸಿದ ನಂತರ ಆದರ ಸಿದ್ಧಿಯುನ್ನು ಪ್ರತ್ಯಕ್ಷೀಕರಿಸಿ ಕೊಳ್ಳುವ ಬಗೆ ತಂತ್ರಶಾಸ್ತ್ರದ ಮುಖ್ಯೋದ್ದೇಶ್ಯವಾಗಿದೆ. ಮಂತ್ರ, ಜಪ, ಹೋಮ, ಯಜ್ಞ, ಯಂತ್ರ, ವ್ರತ, ಉಪವಾಸ, ಯಮ, ನಿಯಮ, ಪ್ರಾಣಾಯಾಮಾದಿ ಇವೆಲ್ಲವೂ ಸಹ ತಂತ್ರಶಾಸ್ತ್ರಕ್ಕೆ ಸಂಬಂಧ ಪಟ್ಟ ವಿಷಯಗಳಾಗಿವೆ. ಸಾಧಕನಿಗೆ ಇವು ಉಪಯೋಗಿಯಾಗುವಂತೆ ಸಾಧಿಸಿದವನಿಗೂ ಸಹ ಅವು ಅತ್ಯಂತೋಪಕಾರಿಗಳಾಗಿವೆ. ಸಾಧಿಸುವವನಿಗೆ ತತ್ವಜ್ಞಾನಸಂಪಾದಿಸಲು ಉಪಕಾರಿಯಾದರೆ ಸಾಧಿಸಿದವನಿಗೆ ಅಣಿಮಾದಿ ಸಿದ್ಧಿಗಳನ್ನು ಅನುಭವಿಸಲು ಉಪಕಾರಿಯಾಗಿವೆ.

## ತಂತ್ರಶಾಸ್ತ್ರ ಮತ್ತು ತಂತ್ರಶಬ್ದನಿರ್ವಚನ

'ತಂತ್ರ' ಎಂಬ ಶಬ್ದವು ಪ್ರಾಚೀನರು ಯಾವ ಅರ್ಥದಲ್ಲಿ ಉಪಯೋಗಿಸಿದ್ದಾರೆ ಎಂದು ತಿಳಿಯು-ವುದು ಅತ್ಯಂತ ಆವಶ್ಯಕ. ಇವತ್ತಿನ ಕಾಲದಲ್ಲಿ ಪ್ರಜಾತಂತ್ರ, ಜೀವನ ತಂತ್ರ, ರಾಜ್ಯತಂತ್ರ ಎಂಬ ಬಹು ವ್ಯಾಪಕವಾದ ಅರ್ಥದಲ್ಲಿ ಈ ತಂತ್ರ ಶಬ್ದವನ್ನು ಬಳಸಲಾಗುತ್ತಿದೆ. ಈ ತಂತ್ರ ಎಂಬ ಶಬ್ದವು ಬಹುವ್ಯಾಪಕವಾದ ಅರ್ಥವನ್ನು ಕೊಡುವದರಲ್ಲಿ ಸಮರ್ಥವಾಗಿದೆ. ಒಂದು ಸಿದ್ಧಿಗೆ ಬೇಕಾದ ಸಾಧನಗಳನ್ನು, ಉಪಾಯಗಳನ್ನು, ವಿಧಾನಗಳನ್ನು, ಶೇಖರಿಸಿ ಹೇಳುವದನ್ನು 'ತಂತ್ರ' ಎಂದು ಕರೆಯಲಾಗಿದೆ. ವಾಚಸ್ಪತ್ಯ, ಶಬ್ದಕಲ್ಪದ್ರುಮ, ಶಬ್ದಾರ್ಥಕೌಸ್ತುಭ ಮುಂತಾದ ಕೋಶಗಳಲ್ಲಿ 28 ಅರ್ಥಗಳನ್ನು ಹೇಳಲಾಗಿದೆ.

**ತಂತ್ರಂ ಪ್ರಧಾನೇ ಸಿದ್ಧಾಂತೇ ತಂತುವಾಯೇ ಪರಿಚ್ಛದೇ । (ಅ.ಕೋ. 3-3-184)**

**ತಂತ್ರಂ ಕುಟುಂಬಕೃತ್ಯೇ ಸ್ಯಾತ್ ಸಿದ್ಧಾಂತೇ ಚೌಷಧೋತ್ತಮೇ ।**

**ಪ್ರಧಾನೇ ತಂತುವಾಯೇ ಚ ಶಾಸ್ತ್ರಭೇದೇ ಪರಿಚ್ಛದೇ ॥**

**ಶ್ರುತಿಶಾಖಾಂತರೇ ಹೇತಾವುಭಯಾರ್ಥಪ್ರಯೋಜನೇ ।**
**ಇತಿ ಕರ್ತವ್ಯತಾಯಾಂ ಚ.................. ॥ (ಮೇದಿನೀ ಕೋಶ)**

**ತಂತ್ರಂ ಸ್ವರಾಷ್ಟ್ರವ್ಯಾಪಾರೇ ತಂತುವಾಯೇ ಪರಿಚ್ಛದೇ ।**
**ಶಾಸ್ತ್ರೌಷಧಾಂತ್ರಮುಖ್ಯೇಷು ಪ್ರಯೋಗೋದ್ಧರಕರ್ಮಣಾಂ ।**
**ಏಕಸ್ಯೈವೋಭಯಾರ್ಥತ್ವೇ ಕುಟುಂಬವ್ಯಾಪೃತಾವಪಿ ॥ (ವೈಜಯಂತೀಕೋಶ) ಎಂದು.**

ಕೆಲವುಗಳಿಗೆ ಮಾತ್ರ ವಾಚಸ್ಪತ್ಯಾದಿಗಳಲ್ಲಿ ಪ್ರಯೋಗವನ್ನು ತೋರಿಸಿದ್ದಾರೆ. ಈ ಕೋಶವನ್ನು ನೋಡಿದಾಗ ಶಾಸ್ತ್ರದಲ್ಲಿಯೂ 'ತಂತ್ರ' ಎಂಬ ಶಬ್ದದ ಪ್ರಯೋಗವಿದೆ ಎಂದು ತಿಳಿಯುತ್ತದೆ.

ಭಾಗವತತಾತ್ಪರ್ಯದಲ್ಲಿ ಆಚಾರ್ಯರು ತಂತ್ರಶಬ್ದದ ನಿರ್ವಚನವನ್ನು ಹೀಗೆ ನಿರೂಪಿಸಿದ್ದಾರೆ.

**ಸರ್ವಾರ್ಥಾ ಯೇನ ತನ್ಯಂತೇ ತ್ರಾಯಂತೇ ಚ ಭಯಾಜ್ಜನಾಃ ।**
**ಇತಿ ತಂತ್ರಸ್ಯ ತಂತ್ರತ್ವಂ ತತ್ಜ್ಞಾಃ ಪರಿಚಕ್ಷತೇ ॥ (ವಿಷ್ಣುಸಂಹಿತಾ)**

ಎಲ್ಲ ಪ್ರಯೋಜನವು ಯಾವುದರಿಂದ ಲಭಿಸುತ್ತದೋ ಯಾವುದರಿಂದ ಎಲ್ಲ ವಿಧ ಭಯಗಳು ದೂರವಾಗುತ್ತವೋ ಅದನ್ನು 'ತಂತ್ರ' ಎಂದು ಕರೆಯುತ್ತಾರೆ. 'ತನ್ಯಂತೇ ತ್ರಾಯತೇ ಚ ಇತಿ ತಂತ್ರಮ್'. ತನ್=ಎಲ್ಲ ಪುರುಷಾರ್ಥಗಳನ್ನು ಕೊಡುತ್ತದೆ. ತ್ರ= ಎಲ್ಲ ವಿಧ ಭಯಗಳನ್ನು ಪರಿಹರಿಸಿ ರಕ್ಷಿಸುತ್ತದೆ. ಆದ್ದರಿಂದ 'ತಂತ್ರ'. ಅರ್ಥತ್ ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿಗೆ ಕಾರಣವಾದ ಶಾಸ್ತ್ರವನ್ನು ತಂತ್ರ ಎಂದು ಕರೆಯುತ್ತಾರೆ.

ಇದೆ ರೀತಿಯಾದ ಅರ್ಥವನ್ನು ಹೇಳುವ ಅನೇಕಪ್ರಮಾಣಗಳನ್ನು ಸರ್ವಮೂಲದಲ್ಲಿ ಆಚಾರ್ಯರು ಉದಾಹರಿಸುತ್ತಾರೆ.

**ತನೋತಿ ವಿಪುಲಾನರ್ಥಾನ್ ತತ್ತ್ವಮಂತ್ರಸಮನ್ವಿತಾನ್ ।**
**ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥ (ವಿಷ್ಣುಸಂಹಿತಾ 2-10)**

**ತನುತೇ ಯೇನ ಕಾರ್ಯಂ ತತ್ ತಂತ್ರಂ ಸಾಧನಮುಚ್ಯತೇ ।**
**ಕಾರಣಾನಾಂ ಸ್ವಶಕ್ತಿರ್ವಾ ಪ್ರಧಾನಂ ಸಾಧನಂ ಯತಃ ॥(ಭಾಗ.ತಾ. 3-7-3)**

**ತತಿಃ ಪ್ರಕಾಶೋ ವಿಸ್ತಾರಃ ತಂತ್ರಂ ಚೇತ್ಯಭಿಧೀಯತೇ । (ಭಾಗ.ತಾ. 3-34-5) ಎಂದು.**

**ತಂತ್ರಶಾಸ್ತ್ರದ ವಿಷಯ**

ತಂತ್ರಶಾಸ್ತ್ರದ ವಿಷಯವನ್ನು ತಿಳಿಯುವುದು ಬಹು ಮುಖ್ಯ. ವಿಷಯ ನಿರ್ಧಾರವಿಲ್ಲದೇ ಅಧಿಕಾರಿಯು ಅಧ್ಯಯನದಲ್ಲಿ ಪ್ರವೃತ್ತನಾಗಲಾರನು. ಈ ತಂತ್ರಶಾಸ್ತ್ರದ ವಿಷಯವನ್ನು ಪುರಾಣಗಳು ಹೀಗೆ ನಿರೂಪಿಸುತ್ತವೆ.

ಸರ್ಗಶ್ಚ ಪ್ರತಿಸರ್ಗಶ್ಚ ಮಂತ್ರನಿರ್ಣಯ ಏವ ಚ ।
ದೇವತಾನಾಂ ಚ ಸಂಸ್ಥಾನಂ ತೀರ್ಥಾನಾಂ ಚೈವ ವರ್ಣನಮ್ ॥

ತಥೈವಾಶ್ರಮಧರ್ಮಶ್ಚ ವಿಪ್ರಸಂಸ್ಥಾನಮೇವ ಚ ।
ಸಂಸ್ಥಾನಂ ಚೈವ ಭೂತಾನಾಂ ಯಂತ್ರಾಣಾಂ ಚೈವ ನಿರ್ಣಯಃ ॥

ಉತ್ಪತ್ತಿರ್ವಿಬುಧಾನಾಂ ಚ ತರೂಣಾಂ ಕಲ್ಪಸಂಜ್ಞಿತಮ್ ।
ಸಂಸ್ಥಾನಂ ಜ್ಯೋತಿಷಾಂ ಚೈವ ಪುರಾಣಾಖ್ಯಾನಮೇವ ಚ ॥

ಕೋಷಸ್ಯ ಕಥನಂ ಚೈವ ವ್ರತಾನಾಂ ಪರಿಭಾಷಣಮ್ ।
ಶೌಚಾಶೌಚಸ್ಯ ಚಾಖ್ಯಾನಂ ನರಕಾಣಾಂ ಚ ವರ್ಣನಮ್ ॥

ಹರಚಕ್ರಸ್ಯ ಚಾಖ್ಯಾನಂ ಸ್ತ್ರೀಪುಂಸೋಶ್ಚೈವ ಲಕ್ಷಣಮ್ ।
ರಾಜಧರ್ಮೋ ದಾನಧರ್ಮೋ ಯುಗಧರ್ಮಸ್ತಥೈವ ಚ ॥

ವ್ಯವಹಾರಃ ಕಥ್ಯತೇ ಚ ತಥಾ ಚಾಧ್ಯಾತ್ಮವರ್ಣನಮ್ ।
ಇತ್ಯಾದಿಲಕ್ಷಣೈರ್ಯುಕ್ತಂ ತಂತ್ರಮಿತ್ಯಭಿಧೀಯತೇ ॥

ಸೃಷ್ಟಿ-ಪ್ರಳಯಗಳ ವಿವರಣೆ, ಮಂತ್ರಗಳ ನಿರ್ಣಯ, ದೇವತೆಗಳ ಲಕ್ಷಣ, ತೀರ್ಥಗಳ ಪರಿಚಯ, ಆಶ್ರಮ ಧರ್ಮಗಳು, ಬ್ರಾಹ್ಮಣ್ಯದ ಲಕ್ಷಣ, ಸಮಸ್ತ ಪ್ರಾಣಿಗಳ ಸ್ಥಿತಿಗತಿ, ಯಂತ್ರಗಳ ನಿರ್ಣಯ, ದೇವತೆಗಳ ಸೃಷ್ಟಿ, ಮರ-ಬಳ್ಳಿಗಳ ಲಕ್ಷಣ ಹಾಗು ವಿಭಾಗಗಳು, ಜ್ಯೋತಿಃಶಾಸ್ತ್ರದ ಪರಿಚಯ, ಪ್ರಾಚೀನ ಇತಿಹಾಸಗಳು, ಶಬ್ದನಿಷ್ಪತ್ತಿ ಮತ್ತು ನಿರುಕ್ತಿಗಳು, ವ್ರತಾನುಷ್ಠಾನಗಳ ವಿವರ, ಶೌಚಾಶೌಚಗಳ ನಿರೂಪಣೆ, ನರಕಗಳ ವಿವರಣೆ, ಹರಚಕ್ರದ ವರ್ಣನೆ, ಸ್ತ್ರೀಪುರುಷರ ಲಕ್ಷಣಗಳು, ರಾಜನೀತಿ, ದಾನಧರ್ಮ, ಚತುರ್ಯುಗ ಧರ್ಮಗಳು, ವ್ಯವಹಾರ, ಜ್ಞಾನ ಮತ್ತು ಪರ ಸಾಧಕವಾದ ಅಧ್ಯಾತ್ಮವಿದ್ಯೆಯ ನಿರೂಪಣೆ ಇತ್ಯಾದಿಗಳನ್ನು ಯಾವುದು ಪ್ರತಿಪಾದಿಸುತ್ತದೋ ಅದೆಲ್ಲವನ್ನು 'ತಂತ್ರ' ಎಂದು ಕರೆಯುವುದುಂಟು.

ಇನ್ನು ಕೆಲವುಗಳನ್ನು ತಂತ್ರಶಾಸ್ತ್ರದ ವಿಷಯ ಎಂದು ತಿಳಿಯಬಹುದು. ಭಗವತ್ತತ್ತ್ವ, ಭಗವಂತನ ಪೂಜಾಕ್ರಮ, ದೇವಾಲಯನಿರ್ಮಾಣವಿಧಿ, ಯಜ್ಞಯಾಗಾದಿಗಳು, ಪ್ರತಿನಿತ್ಯದಲ್ಲಿ ಸಾಧಕನು ಅನುಷ್ಠಾನಮಾಡಬೇಕಾದ ಜಪಾದಿಗಳು, ಯಮ, ನಿಯಮ, ಪ್ರಾಣಾಯಾಮ ಇವೆ ಮೊದಲಾದವು ತಂತ್ರಶಾಸ್ತ್ರಕ್ಕೆ ವಿಷಯವಾಗಿವೆ. ಆದ್ದರಿಂದಲೇ **'ತೇನ ಪೃಷ್ಟಃ ಸ ಭಗವಾನ್'** ಎಂಬ ತಂತ್ರಸಾರಸಂಗ್ರಹದ ಎರಡನೇಯ ಶ್ಲೋಕವನ್ನು ವ್ಯಾಖ್ಯಾನಿಸುವಾಗ ಛಲಾರಿ ಆಚಾರ್ಯರು, ವೇಂಕಟಪತ್ಯಾಚಾರ್ಯರು, ಮಂಕಾಲಿ ಆಚಾರ್ಯರೇ ಮುಂತಾದ ಮಹನೀಯರು ಈ ವಿಧವಾಗಿ ಅವತರಣಿಕೆಯನ್ನು ನೀಡುತ್ತಾರೆ.

**'ಸರ್ವೋತ್ತಮಃ ಸಕಲಗುಣಪರಿಪೂರ್ಣಃ ಕಃ ? ಕಿಂ ತತ್ರ ಪ್ರಮಾಣಮ್ ? ಜಪ್ಯಮಂತ್ರಾಃ ಕೇ ? ತತ್ಪ್ರತಿಪಾದ್ಯಶ್ಚ ಕಃ ? ಕಥಂ ತದ್ಧ್ಯಾನಮನುಷ್ಠೇಯಮ್ ? ಪೂಜ್ಯಶ್ಚ ಕಃ ? ಪೂಜಾ ಚ ಕಥಂ ಕಾರ್ಯಾ? ಅಜ್ಞಾನಾಂ ಪೂಜಾಯಾಃ ಸಾಕ್ಷಾತ್ಕರ್ತುಮಶಕ್ಯತ್ವೇನ ಪ್ರತಿಮಾಯಾಮೇವ ಕರ್ತವ್ಯತ್ವಾತ್ ತದರ್ಥಂ ಪ್ರತಿಮಾ ಕಾರ್ಯಾ । ತನ್ನಿರ್ಮಾಣವಿಧಿಶ್ಚ ಕಥಮ್ ? ಕಿಂ ತಲ್ಲಕ್ಷಣಮ್ ? 'ಅಪ್ರತಿಷ್ಠಿತಬಿಂಬಸ್ಯ**

**ಪೂಜನಂ ಸಿದ್ಧಿಹಾನಿಕೃತ್' ಇತ್ಯುಕ್ತೇಃ ಅವಶ್ಯಂ ಪ್ರತಿಷ್ಠಾ ಕಾರ್ಯಾ । ಸಾಚ ಕಥಂ ಕರ್ತವ್ಯಾ ?** ಇತ್ಯಾದಿ....'

ಈ ಎಲ್ಲ ಪ್ರಶ್ನೆಗಳಿಗೆ ಉತ್ತರರೂಪವಾಗಿಯೇ ಈ ತಂತ್ರಸಾರಸಂಗ್ರಹ ಎಂಬ ಗ್ರಂಥವು ಪ್ರವೃತ್ತವಾಗಿದೆ. ಆದ್ದರಿಂದ ಭಗವತ್ತತ್ವ, ಭಗವತ್ತತ್ತ್ವವಿಷಯದಲ್ಲಿ ಪ್ರಮಾಣ, ಜಪ್ಯಮಂತ್ರಗಳು, ಮಂತ್ರಪ್ರತಿಪಾದ್ಯರೂಪಗಳು, ಭಗವದ್ಧ್ಯಾನ, ಭಗವಂತನ ಪೂಜೆ, ಪ್ರತಿಮಾನಿರ್ಮಾಣವಿಧಿ, ದೇವಾಲಯನಿರ್ಮಾಣವಿಧಿ, ಪ್ರತಿಮಾ-ದೇವಾಲಯದ ಪ್ರತಿಷ್ಠಾಪನೆ, ಪ್ರತಿಮಾಲಕ್ಷಣ ಇತ್ಯಾದಿಯಾಗಿ ಎಲ್ಲವೂ ತಂತ್ರಶಾಸ್ತ್ರಕ್ಕೆ ವಿಷಯವಾಗಿವೆ.

ಇನ್ನು ಕೆಲವು ವಿಷಯಗಳನ್ನೂ ಸಹ ನಾವು ತಂತ್ರಕ್ಕೆ ಸಂಬಂದ ಪಟ್ಟಂತೆ ಪರಿಗಣಿಸಬಹುದು. ಯಮನಿಯಮಾದ್ಯಷ್ಟಾಂಗಯೋಗವು ತಂತ್ರಕ್ಕೆ ವಿಷಯವಾಗಿದೆ. ಯೋಗದ ಆವಶ್ಯಕತೆಯು ಇಂದಿನ ಜಗತ್ತಿನಲ್ಲಿ ಅತ್ಯಂತ ಪ್ರಸ್ತುತ ಹಾಗು ಪ್ರಚಲಿತವಾಗಿದೆ. ಆ ಯೋಗಕ್ಕೆ ಸಂಬಂಧ ಪಟ್ಟ ಯಮ ನಿಯಮ ಪ್ರಾಣಾಯಾಮ ಪ್ರತ್ಯಾಹಾರ ಮುಂತಾದವುಗಳು ಸಹ ಅವಾಂತರವಾಗಿ ತಂತ್ರಶಾಸ್ತ್ರಕ್ಕೆ ವಿಷಯವೆಂದು ಪರಿಗಣಿತವಾಗಿವೆ. ಆದ್ದರಿಂದಲೇ ಆಚಾರ್ಯರು ಈ ತಂತ್ರಸಾಸ್ತ್ರದಲ್ಲಿ ಯೋಗದ ನಿರೂಪಣೆಯನ್ನು ಯಮ, ನಿಯಮ, ಪ್ರಾಣಾಯಾಮಾದಿಗಳ ನಿರೂಪಣೆಯನ್ನು ಚತುರ್ಥಾಧ್ಯಾಯದಲ್ಲಿ ಮಾಡಿರುವರು. ನಾಡೀಶೋಧದ ರೀತಿಯನ್ನೂ ಸಹ ವಿವರಿಸಿರುವರು.

ಈ ತಂತ್ರಶಾಸ್ತ್ರದ ಲಕ್ಷಣ-ವಿಷಯಗಳನ್ನು ಪರಾಮರ್ಶಿಸಿದಾಗ ಪ್ರಾಚೀನರ ದೃಷ್ಟಿಯಲ್ಲಿ ತಂತ್ರಶಾಸ್ತ್ರ ಅಥವಾ ಆಗಮ ಎಂದರೆ ಒಂದು ನಿರ್ದಿಷ್ಟವಾದ ಗ್ರಂಥವಲ್ಲ. ಕಿಂತು ಜೀವನೋಪಾಯವಾದ ಎಲ್ಲ ಬಗೆಗಳನ್ನು ಬೋಧಿಸುವ ಜೀವನತಂತ್ರವೇ ತಂತ್ರಶಾಸ್ತ್ರವಾಗಿದೆ. ಈ ದೃಷ್ಟಿಯಿಂದ ಆಚಾರ್ಯರು ಭಾಗವತತಾತ್ಪರ್ಯದಲ್ಲಿ ಹೇಳಿದ ತಂತ್ರಶಬ್ದದ ನಿರ್ವಚನವೂ ಸಹ ಅತ್ಯಂತ ಸಂಗತವಾಗುತ್ತದೆ. ಯಾವುದು ನಮಗೆ ಜ್ಞಾನಸಂಪಾದಕವೋ ಅನಿಷ್ಟನಿವರ್ತಕವೋ ಅದು ತಂತ್ರ ಎಂದು.

**ತಂತ್ರಶಾಸ್ತ್ರದ ವಿಭಾಗ**

ಈ ತಂತ್ರಶಾಸ್ತ್ರವು ಸಾತ್ವಿಕ ರಾಜಸ ತಾಮಸ ಎಂದು ಮೂರು ವಿಧವಾಗಿದೆ.

1) ವಿಷ್ಣುಪಾರಮ್ಯವನ್ನು ಹೇಳುವ ತಂತ್ರಶಾಸ್ತ್ರ ಸಾತ್ವಿಕ.

2) ಶಿವಪಾರಮ್ಯವನ್ನು ಹೇಳುವ ತಂತ್ರ ರಾಜಸ

3) ಶಕ್ತಿಪಾರಮ್ಯವನ್ನು ಹೇಳುವ ತಂತ್ರ ತಾಮಸ. ವಾಮಾಚಾರಾದಿಗಳನ್ನು ಹೇಳುವುದೂ ಸಹ ತಾಮಸ ತಂತ್ರವೇ ಆಗಿದೆ.

ಸಾತ್ವಿಕತಂತ್ರಗಳಲ್ಲಿ ಪ್ರಸಿದ್ಧವಾದ 'ಪಂಚರಾತ್ರ'ವು ವಿಷ್ಣುಪಾರಮ್ಯವನ್ನು ಹೇಳುವ ತಂತ್ರವಾಗಿದೆ.

**ರಾತ್ರಿರಜ್ಞಾನಮಿತ್ಯುಕ್ತಂ ಪಂಚೇತ್ಯಜ್ಞಾನನಾಶಕಮ್ ।**
**ತಚ್ಛಾಸ್ತ್ರಂ ಪಂಚರಾತ್ರಂ ಸ್ಯಾತ್ ಅನ್ವರ್ಥಸ್ಯಾನುರೋಧತಃ ॥ (ಶ್ರೀಪ್ರಶ್ನಸಂಹಿತಾ 2-40)**

ರಾತ್ರಿ ಎಂದರೆ ಅಜ್ಞಾನ. ಪಂಚ ಎಂದರೆ ಅದನ್ನು ನಾಶಪಡಿಸುವುದು. ಅಜ್ಞಾನವನ್ನು ನಾಶಪಡಿಸುವ ಶಾಸ್ತ್ರವನ್ನು ಪಂಚರಾತ್ರ ಎಂದು ಕರೆಯುತ್ತಾರೆ. ಇದು ಅನ್ವರ್ಥಕವಾದ ಹೆಸರಾಗಿದೆ ಎಂದು ಶ್ರೀಪ್ರಶ್ನಸಂಹಿತಾದಲ್ಲಿ ಪಂಚರಾತ್ರಶಬ್ದದ ನಿರ್ವಚನವನ್ನು ಹೇಳಲಾಗಿದೆ. ಎಲ್ಲ ಬಗೆಯ ಅಜ್ಞಾನವನ್ನು ನಾಶಪಡಿಸುವ ಈ ಪಂಚರಾತ್ರವು ತಂತ್ರಶಾಸ್ತ್ರಗಳಲ್ಲಿಯೇ ಅತ್ಯಂತ ಶ್ರೇಷ್ಠವಾದದು.

'ಸ್ತ್ರೀಶೂದ್ರಬ್ರಹ್ಮಬಂಧೂನಾಂ ತಂತ್ರಜ್ಞಾನೇऽಧಿಕಾರಿತಾ' ಎಂಬ ಭಾಷ್ಯಕ್ಕೆ ವ್ಯಾಖ್ಯಾನಿಸುವಾಗ ಟೀಕಾಚಾರ್ಯರು **'ತಂತ್ರಂ ಪಂಚರಾತ್ರಾದಿ'** ಎಂದು ವ್ಯಾಖ್ಯಾನಿಸಿದ್ದಾರೆ. ಅಂದರೆ ಪಂಚರಾತ್ರಾದಿಗಳೂ ಸಹ ತಂತ್ರಶಾಸ್ತ್ರವೇ ಆಗಿದೆ ಎಂದು ತಿಳಿಯುತ್ತದೆ. ಸಾತ್ವಿಕ ರಾಜಸ ತಾಮಸತಂತ್ರಗಳೂ ತಂತ್ರವೇ ಆಗುತ್ತವೆ. ಈ ತಂತ್ರಶಬ್ದಾರ್ಥವು ವ್ಯಾಪಕವಾಗಿದೆ. ಆ ತಂತ್ರದಲ್ಲಿ ಅತ್ಯಂತಶ್ರೇಷ್ಠವಾದ ಸಾತ್ವಿಕವಾದ ತಂತ್ರವೆಂದರೆ ಪಂಚರಾತ್ರವಾಗಿದೆ ಎಂದು ಅಭಿಪ್ರಾಯ.

**'ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್'** ಎಂಬ ಪ್ರಮಾಣಾನುಸಾರವಾಗಿ ಸಂಪೂರ್ಣ ಪಂಚರಾತ್ರವನ್ನು ರಚಿಸಿದವನು ಮೂಲರೂಪಿ ನಾರಾಯಣ.

**ಮಹಿದಾಸಾಭಿಧೋ ಜಜ್ಞೇ ಇತರಾಯಾಸ್ತಪೋಬಲಾತ್ ।**
**ಸಾಕ್ಷಾತ್ ಸ ಭಗವಾನ್ವಿಷ್ಣುಃ ಯಸ್ತಂತ್ರಂ ವೈಷ್ಣವಂ ವ್ಯಧಾತ್ ॥ (ಬ್ರ.ಸೂ.ಭಾ. 1-1-12)**

ಎಂಬ ಅಂತಿಮಪ್ರಾಣಾಧಿಕರಣ ಭಾಷ್ಯದಿಂದ ವೈಷ್ಣವತಂತ್ರಶಾಸ್ತ್ರವನ್ನು ಮಹಿದಾಸರೂಪದಿಂದ ರಚಿಸಿದ ಎಂದು ತಿಳಿಯುತ್ತದೆ.

ಆದರೆ ಶಂಕರಾಚಾರ್ಯರು 'ಉತ್ಪತ್ತ್ಯಸಂಭವಾತ್' ಎಂಬ ಸೂತ್ರವು ಪಂಚರಾತ್ರದ ಅಪ್ರಾಮಾಣ್ಯವನ್ನು ಸಾಧಿಸುತ್ತದೆ ಎಂದು ವ್ಯಾಖ್ಯಾನಿಸಿ ಪಂಚರಾತ್ರವನ್ನು ಅಪ್ರಮಾಣವೆಂದು ಹೇಳಿದ್ದಾರೆ. ಆಚಾರ್ಯರು ಅನೇಕಪ್ರಮಾಣಗಳಿಂದ ಪಂಚರಾತ್ರಕ್ಕೆ ಪ್ರಾಮಾಣ್ಯವನ್ನು ಸಮರ್ಥಿಸಿದ್ದಾರೆ.

ಯಾಮುನಾಚಾರ್ಯರು 'ಪಂಚರಾತ್ರಪ್ರಾಮಾಣ್ಯರಕ್ಷಾ' ಎಂಬ ಗ್ರಂಥವನ್ನು ರಚಿಸಿ ಪಂಚರಾತ್ರಪ್ರಾಮಾಣ್ಯವನ್ನು ಸಮರ್ಥಿಸಿರುವರು.

9ನೇ ಶತಮಾನದ ನೈಯ್ಯಾಯಿಕನಾದ ಜಯಂತಭಟ್ಟನೂ ಸಹ ನ್ಯಾಯಮಂಜರೀಯಲ್ಲಿ ಪಂಚರಾತ್ರಪ್ರಾಮಾಣ್ಯವನ್ನು ಸಮರ್ಥಿಸಿದ್ದಾನೆ.

ಪ್ರಮಾಣತಮವಾದ ಪಂಚರಾತ್ರವು ತಂತ್ರಗ್ರಂಥಗಳಲ್ಲಿ ಸಾತ್ವಿಕ ಹಾಗು ಪರಮೋತ್ತಮವಾದ ಗ್ರಂಥವಾಗಿದೆ.

### ತಂತ್ರಸಾರ ಮತ್ತು ತಂತ್ರಸಾರಸಂಗ್ರಹ

ಮೂಲತಃ ತಂತ್ರಶಾಸ್ತ್ರವು ವೇದಗಳಲ್ಲಿಯೇ ಬಂದಿದೆ. ಇದರ ವಿವರಣೆಯನ್ನು ಇತಿಹಾಸ ಪುರಾಣ ಪಂಚರಾತ್ರಗಳಲ್ಲಿ ಕಾಣಬಹುದು. ಮಹಾಭಾರತ ಭಾಗವತಾದಿ ಗ್ರಂಥಗಳಲ್ಲಿ ತಂತ್ರಶಾಸ್ತ್ರದ

ವಿಷಯವಾದ ಯೋಗ ಭಕ್ತಿ ವೈರಾಗ್ಯ ಇತ್ಯಾದಿ ಅನೇಕವಿಷಯಗಳ ನಿರೂಪಣೆಯನ್ನು ಕಾಣುತ್ತೇವೆ. ನಾರಾಯಣರೂಪದಿಂದ ವಿರಚಿತವಾದ ಶತಕೋಟಿವಿಸ್ತೃತವಾದ ಪಂಚರಾತ್ರ ತಂತ್ರಶಾಸ್ತ್ರದ ಪ್ರಧಾನ ಗ್ರಂಥವಾಗಿದೆ. ಶ್ರೀಮದಾಚಾರ್ಯರು ಸರ್ವಮೂಲಗ್ರಂಥಗಳಲ್ಲಿ ಉದಾಹರಿಸುವ ತಂತ್ರಮಾಲಾ, ತಂತ್ರನಿರ್ಣಯ, ತಂತ್ರನಿರುಕ್ತ, ತಂತ್ರಪ್ರಕಾಶಿಕಾ ಇವೇ ಮೊದಲಾದ ಗ್ರಂಥಗಳು ತಂತ್ರಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳು ಎಂದು ಹೆಸರಿನಿಂದ ತಿಳಿಯುತ್ತದೆ.

ತಂತ್ರಸಾರದ ತೃತೀಯಾಧ್ಯಾಯದ '**ತಂತ್ರಮಾರ್ಗಾಸ್ತು ಹರಿಣಾ ಹ್ಯಸಂಖ್ಯಾಃ ಕೀರ್ತಿತಾ ಅಪಿ**' ಎಂಬ ವಾಕ್ಯದಿಂದ ಶ್ರೀಹರಿಯು ತಂತ್ರಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನು ರಚಿಸಿರುವನು ಎಂದು ತಿಳಿಯುತ್ತದೆ. ಅವುಗಳಲ್ಲಿ ತಂತ್ರಸಾರವು ಪ್ರಧಾನವಾದ ಗ್ರಂಥವಾಗಿದೆ.

**ವಿಧಿಂ ವಿಧಾಯ ಸರ್ಗಾದೌ ತೇನ ಪೃಷ್ಟೋಽಬ್ಜಲೋಚನಃ ।**
**ಆಹ ದೇವೋ ರಮೋತ್ಸಂಗವಿಲಸತ್ಪಾದಪಲ್ಲವಃ ॥ (ತಂ.ಸಾ.1-2)**

'**ಅಥವಿಷ್ಣೂದಿತೇ ತಂತ್ರಸಾರೇ ಮಂತ್ರಗಣೋ ಯಃ**' ಮುಂತಾದ ವಾಕ್ಯದಿಂದ ಮಹಾವಿಷ್ಣುಕೃತವಾದ ತಂತ್ರಶಾಸ್ತ್ರವು ತಂತ್ರಗ್ರಂಥಗಳಿಗೆಲ್ಲ ಆಕರವಾಗಿದೆ. ವಿಷ್ಣುಕೃತವಾದ ತಂತ್ರಸಾರಗ್ರಂಥವು ಇಂದಿಗೆ ಉಪಲಬ್ಧವಿಲ್ಲ. ಆಚಾರ್ಯರು ಭಾಗವತತಾತ್ಪರ್ಯದ ಅನೇಕ ಸ್ಥಳಗಳಲ್ಲಿ ತಂತ್ರಸಾರ ಗ್ರಂಥವನ್ನು ಉದಾಹರಿಸುತ್ತಾರೆ. ಶ್ರೀಮದಾಚಾರ್ಯರು ಶ್ರೀರಂಗದಿಂದ ಕೇರಳಕ್ಕೆ ತೆರಳುವ ಮಾರ್ಗಮಧ್ಯದಲ್ಲಿ ಮುವತ್ತುವಿಧವಾದ ವರಾಹಮಂತ್ರಗಳನ್ನು ಬಲ್ಲ ಯೋಗಸಿದ್ಧಿಯನ್ನು ಪಡೆದ ಯೋಗಿಯೊಬ್ಬನು ಭೇಟಿಯಾಗುತ್ತಾನೆ. ಆಚಾರ್ಯರು ಅವನು ತಿಳಿದ ಮಂತ್ರಕ್ಕಿಂತಲೂ ಹೆಚ್ಚಿನ ವರಾಹಮಂತ್ರಗಳನ್ನು ಹೇಳುತ್ತಾರೆ. ಆಗ ಅವನಿಗೆ ಅಚ್ಚರಿಗೆ ಪಾರವಿರಲಿಲ್ಲ. ಈ ಪ್ರಸಂಗವು ಸುಮಧ್ವವಿಜಯದ ಭಾವಪ್ರಕಾಶಿಕೆ (5-48) ಯಲ್ಲಿ ಉದಾಹರಿಸಲಾಗಿದೆ. ಆಚಾರ್ಯರ ಕಾಲದಲ್ಲಿ ಪ್ರಬಲತಾಮಸಗ್ರಂಥಗಳ ಹಾವಳಿಯ ಸಂದರ್ಭದಲ್ಲಿಯೂ ಸಹ ಪರಿಶುದ್ಧವಾದ ತಂತ್ರಶಾಸ್ತ್ರದ ಎಳೆಯೊಂದು ಉಳಿದಿದ್ದಕ್ಕೆ ಪುರಾವೆಗಳಿವೆ.

**ತ್ರಿಂಶದ್ವಾರಾಹಮನುವಿತ್ ಕಶ್ಚಿದ್ಯೋಗ್ಯಾಸ ವಿಸ್ಮಿತಃ ।**
**ಸೂಚಿತೇಷ್ವೇವ ಸರ್ವೇಷು ಮಧ್ವೇನಾಭ್ಯಧಿಕೇಷ್ವಪಿ ॥ ಎಂದು.**

ಈ ಎಲ್ಲ ಮೂಲಗ್ರಂಥಗಳು ಮಂದರಿಗೆ ತಿಳಿಯದಿದ್ದಾಗ ಮತ್ತು ಅತಿವಿಸ್ತೃತವೂ ಆದ್ದರಿಂದ ಅತ್ಯವಶ್ಯವಾಗಿ ಅನುಷ್ಠೇಯವಾದ ಕರ್ಮಗಳನ್ನು ನಿರೂಪಿಸುವದಕ್ಕಾಗಿ ಶ್ರೀಮದಾಚಾರ್ಯರು 'ತಂತ್ರಸಾರಸಂಗ್ರಹ' ಎಂಬ ಗ್ರಂಥವನ್ನು ರಚಿಸಿದರು. ಈ ವಿಷಯವನ್ನು ಸ್ವಯಂ ಆಚಾರ್ಯರೆ ಮೂರನೇಯ ಅಧ್ಯಾಯದಲ್ಲಿ ತಿಳಿಸಿರುವರು.

**ತಂತ್ರಮಾರ್ಗಾಸ್ತು ಹರಿಣಾ ಹ್ಯಸಂಖ್ಯಾ ಕೀರ್ತಿತಾ ಅಪಿ ।**
**ತೇಷ್ವಯಂ ಸುಗಮೋ ಮಾರ್ಗಃ ಸುಫಲಶ್ಚಾನುತಿಷ್ಠತಾಮ್ ॥**

**ಯಾವತೋ ಹ್ಯನನುಷ್ಠಾನೇ ಕರ್ಮಪೂರ್ತಿರ್ನ ವಿದ್ಯತೇ ।**
**ತಾವತ್ಸಮಸ್ತಂ ಕಥಿತಂ ಹ್ಯಸ್ಮಿನ್ ತಂತ್ರೇ ಯಥಾವಿಧಿ ॥ (3-156,157)**

ಮೂಲತಂತ್ರಸಾರ ಗ್ರಂಥದ ಉತ್ಸವಮೂರ್ತಿಯಂತೆ ಈ 'ತಂತ್ರಸಾರಸಂಗ್ರಹ' ಗ್ರಂಥವು ವಿರಾಜಮಾನವಾಗಿದೆ.

**ಪ್ರೀಯತೇऽನೇನ ಮಾರ್ಗೇಣ ಪೂಜಿತೋ ಮುಕ್ತಿದೋ ಭವೇತ್ ।**
**ಕಾಮದಶ್ಚ ಸ್ವಭಕ್ತಾನಾಂ ಭಗವಾನ್ ಪುರುಷೋತ್ತಮಃ ॥ (3-158)**

**ಗ್ರಂಥೋऽಯಂ ಪಾಠಮಾತ್ರೇಣ ಸಕಲಾಭೀಷ್ಟಸಿದ್ಧಿದಃ ।**
**ಕಿಮು ಜ್ಞಾನಾದನುಷ್ಠಾನಾತ್ ಉಭಯಸ್ಮಾತ್ ಪುನಃ ಕಿಮು ॥ (4-163)**

ತಂತ್ರಸಾರಸಂಗ್ರಹೋಕ್ತಕ್ರಮದಿಂದ ಶ್ರೀಹರಿಯನ್ನು ಪೂಜಿಸಿದರೆ ಶ್ರೀಹರಿಯು ಅತ್ಯಂತ ಸಂತುಷ್ಟನಾಗಿ ತನ್ನ ಭಕ್ತರಿಗೆ ಸಕಲಾಭೀಷ್ಟವನ್ನು ನೀಡುವನು. ಈ ಗ್ರಂಥವು ಕೇವಲ ಪಾರಾಯಣದಿಂದಲೇ ಸಕಲಾಭೀಷ್ಟವನ್ನು ನೀಡುತ್ತದೆ. ಜ್ಞಾನಪೂರ್ವಕಾನುಷ್ಠಾನದಿಂದ ಇನ್ನೇನು ಹೇಳಬೇಕು ಎಂದು ಆಚಾರ್ಯರು ಕೈಮುತ್ಯದಿಂದ ಈ ಗ್ರಂಥದ ಫಲವನ್ನು ಸ್ವಯಂ ತಾವೇ ತಿಳಿಸಿರುವರು.

**ಕಸ್ತಂತ್ರಸಾರಂ ಸಂಪ್ರಾಪ್ಯ ನ ಸ್ಯಾತ್ ಪರ್ಯಾಪ್ತವಾಂಛಿತಃ ।**
**ಅಮರ್ತ್ಯೈರಾಶ್ರಿತಚ್ಛಾಯಂ ಕಲ್ಪದ್ರುಮಮಿವೋತ್ತಮಮ್ ॥ (15-78)**

ತಂತ್ರಸಾರವನ್ನು ಹೊಂದಿದ ಪುರುಷನ ಬಯಕೆಯು ಸಿದ್ಧಿಸದೇ ಉಳಿದೀತೇ! ಎಂದು ಸುಮಧ್ವವಿಜಯವೂ ಸಹ ಸಾರಿದೆ.

ವೈಷ್ಣವಸಿದ್ಧಾಂತದ ತಂತ್ರಗ್ರಂಥಗಳಲ್ಲಿ ಶ್ರೀಮದಾಚಾರ್ಯರ ತಂತ್ರಸಾರಸಂಗ್ರಹವು ಅಗ್ರಮಾನ್ಯಕೃತಿಯಾಗಿ ಮಾನ್ಯವಾಗಿದೆ. ನಾಲ್ಕು ಅಧ್ಯಾಯಗಳಲ್ಲಿ ಅಷ್ಟಮಹಾಂತ್ರಗಳು, ಇತರ ವಿಷ್ಣುಮಂತ್ರಗಳು, ಅನೇಕ ವೈಷ್ಣವದೇವತಾಮಂತ್ರಗಳು, ದೇವಪೂಜಾಪದ್ಧತಿ, ತತ್ತ್ವನ್ಯಾಸ, ಮಾತೃಕಾನ್ಯಾಸ, ಪೀಠಪೂಜೆ, ಆವರಣಪೂಜೆ, ಕಲಶಪೂಜಾವಿಧಾನ, ಹೋಮಕುಂಡ ನಿರ್ಮಾಣ, ಹೋಮದ ವಿಧಾನಗಳು, ಹೋಮದ್ರವ್ಯಗಳು, ಪ್ರತಿಮಾನಿರ್ಮಾಣ, ಪ್ರತಿಮಾನಿರ್ಮಾಣ ಶಿಲಾವಿಚಾರ, ಪ್ರತಿಮಾಲಕ್ಷಣ, ದೇವಾಲಯನಿರ್ಮಾಣವಿಧಿ, ಶಿಲಾಪರೀಕ್ಷಾವಿಧಿ, ದೇವತಾ ಪ್ರತಿಷ್ಠಾಪನಾವಿಧಿ, ಅಧಿವಾಸನವಿಧಿ, ಅಂಕುರಾರ್ಪಣವಿಧಿ, ಸಂಪ್ರೋಕ್ಷಣವಿಧಿ, ಜೀರ್ಣದೇವಾಲಯೋದ್ಧಾರವಿಧಿ, ವಾಸ್ತುಪೂಜಾವಿಧಿ, ಯಂತ್ರಲೇಖನಕ್ರಮ, ಯಮ, ನಿಯಮ, ಪ್ರಾಣಾಯಾಮ ಪ್ರತ್ಯಾಹಾರಾದಿಗಳು, ಅಷ್ಟಾಂಗಯೋಗ, ಸುಷುಮ್ನಾದಿ ನಾಡಿಗಳ ವಿವರಣೆ ಇವೇ ಮೊದಲಾದ ತಂತ್ರಶಾಸ್ತ್ರಕ್ಕೆ ಸಂಬಂದಪಟ್ಟ ಸಕಲ ವಿಷಯಗಳ ಬಗ್ಗೆ ಸಮಗ್ರಮಾಹಿತಿಯನ್ನು ಈ ಗ್ರಂಥದಲ್ಲಿ ನಿರೂಪಿಸಲಾಗಿದೆ. ಈ ಎಲ್ಲವಿಷಯಗಳ ಅಧಿಕೃತಮಾಹಿತಿಯನ್ನು ನೀಡುವ ಈ ಕೃತಿ ತಂತ್ರವಾಂಙ್ಮಯದ ಮೇರು ಕೃತಿಯಾಗಿದೆ.

ಶ್ರೀಮದಾಚಾರ್ಯರ ಇತರ ಕೃತಿಗಳಾದ ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ಜಯಂತೀನಿರ್ಣಯ, ಯತಿಪ್ರಣವಕಲ್ಪ, ಸನ್ನ್ಯಾಸಪದ್ಧತಿಗಳು ತಂತ್ರಸಾರಸಂಗ್ರಹಕ್ಕೆ ಪೂರಕವಾದ ಕೃತಿಗಳಾಗಿವೆ. ಶ್ರೀಮದಾಚಾರ್ಯರ ಅನುಜರಾದ ವಿಷ್ಣುತೀರ್ಥರ ವಿಷ್ಣುತೀರ್ಥೀಯವೆಂದೇ

ಪ್ರಸಿದ್ಧಿಯನ್ನು ಪಡೆದ ಸಂನ್ಯಾಸಪದ್ಧತಿಯು ಆಚಾರ್ಯರ ತಂತ್ರದ ರೀತಿಯನ್ನು ಅನುಸರಿಸಿ ರಚಿತವಾಗಿದೆ. ಆಚಾರ್ಯರ ತಂತ್ರಸಾರಸಂಗ್ರಹಕ್ಕೆ ವ್ಯಾಖ್ಯಾನರೂಪವಾಗಿದೆ.

ಅದೇರೀತಿಯಾಗಿ ನಾರಾಯಣಪಂಡಿತಾಚಾರ್ಯರ ಯೋಗದೀಪಿಕಾ, ಶ್ರೀಮಜ್ಜಯತೀರ್ಥರ ಪದ್ಯಮಾಲಾ ಮುಂತಾದ ಗ್ರಂಥಗಳು ಆಚಾರ್ಯರ ತಂತ್ರಸಾರಸಂಗ್ರಹದ ಕೆಲವು ವಿಚಾರಗಳಿಗೆ ಅಪೂರ್ವವಾದ ವಿವರಗಳನ್ನು ನೀಡುತ್ತವೆ. ಹೀಗೆ ಎಲ್ಲ ರೀತಿಯಿಂದಲೂ ಮೂಲ ತಂತ್ರಗ್ರಂಥಕ್ಕೆ ಪರಿಪೂರ್ಣನ್ಯಾಯವನ್ನು ಒದಗಿಸಿದ ಕೃತಿ ತಂತ್ರಸಾರಸಂಗ್ರಹವಾಗಿದೆ.

**ತಂತ್ರಸಾರಸಂಗ್ರಹವಿಷಯ**

ತಂತ್ರಕ್ಕೆ ಸಂಬಂಧಪಟ್ಟ ಅನೇಕವಿಷಯಗಳನ್ನು ತಂತ್ರಸಾರಸಂಗ್ರಹದಲ್ಲಿ ಆಚಾರ್ಯರು ಪ್ರತಿಪಾದಿಸಿದ್ದಾರೆ. '**ಯಾವತೋ ಹ್ಯನನುಷ್ಠಾನೇ ಕರ್ಮಪೂರ್ತಿರ್ನ ವಿದ್ಯತೇ । ತಾವತ್ಸಮಸ್ತಂ ಕಥಿತಮ್...**' ಎಂದು ತೃತೀಯಾಧ್ಯಾಯದಲ್ಲಿ ತಿಳಿಸಿದಂತೆ ಅತ್ಯಾವಶ್ಯಕವಾದ ಭಗವಂತನ ಗುಣಪೂರ್ಣತ್ವ, ಮಂತ್ರಗಳ ಅಭಿವ್ಯಕ್ತಿ, ಅವುಗಳಿಂದ ಪ್ರತಿಪಾದ್ಯರೂಪಗಳು ಇತ್ಯಾದಿ ಅನೇಕ ವಿಷಯಗಳನ್ನು ಅನುಷ್ಠಾನಯೋಗ್ಯವಾದ ಕರ್ಮಗಳನ್ನು, ಮಂತ್ರಗಳ ಸಿದ್ಧಿಗೆ ಬೇಕಾದ ಇತಿಕರ್ತವ್ಯತಾಗಳನ್ನು ಆಚಾರ್ಯರು ಪ್ರತಿಪಾದಿಸಿದ್ದಾರೆ. ವ್ಯಾಖ್ಯಾನಕಾರರಾದ ಮಹನೀಯರು ಆಯಾ ವಿಷಯಗಳ ನಿರೂಪಣೆಯನ್ನು, ಅನೇಕ ತಂತ್ರಗ್ರಂಥಗಳನ್ನು, ಪ್ರಾಚೀನರ ಮಾತುಗಳನ್ನು ಸರ್ವಮೂಲಗಳಲ್ಲಿ ಉದಾಹರಿಸಿದ ಇದಕ್ಕೆ ಸಂಬಂಧಪಟ್ಟ ಪ್ರಮಾಣಗಳನ್ನು ಉದಾಹರಿಸಿ ವ್ಯಾಖ್ಯಾನಿಸಿದ್ದಾರೆ. ಆ ವ್ಯಾಖ್ಯಾನದ ನೆರಳಿನಲ್ಲಿ ಆಚಾರ್ಯರ ತಂತ್ರಸಾರಸಂಗ್ರಹಗ್ರಂಥದ ಕೆಲವು ವಿಷಯಗಳನ್ನು ಸ್ಥಾಲೀಪುಲಾಕನ್ಯಾಯೇನ ತಿಳಿಯೋಣ.

**ಓಂಕಾರದ ವಿಸ್ತಾರ ಸಕಲ ವಾಙ್ಮಯ**

ಓಂಕಾರವು ಗುಣಪರಿಪೂರ್ಣನಾದ ಭಗವಂತನನ್ನು ಪ್ರತಿಪಾದಿಸುತ್ತದೆ. ಈ ಓಂಕಾರದ ವಿಸ್ತಾರವೇ ಸಮಸ್ತವಾಙ್ಮಯ ಪ್ರಪಂಚ. ಈ ಓಂಕಾರವು ಅಕಾರ, ಉಕಾರ, ಮಕಾರ, ನಾದ ಬಿಂದು, ಘೋಷ, ಶಾಂತ, ಅತಿಶಾಂತ ಎಂದು ಎಂಟು ಅಕ್ಷರಗಳಿಂದ ಕೂಡಿದೆ.

'**ಅಹಮೇಕೋಽಖಿಲಗುಣೋ ವಾಚಕಃ ಪ್ರಣವೋ ಮಮ**' ಎಂಬ ಪ್ರಥಮಾಧ್ಯಾಯದ ಮೂರನೇಯ ಶ್ಲೋಕವನ್ನು ವ್ಯಾಖ್ಯಾನಿಸಿದ ಮಹನೀಯರು 'ನಾದ ಮುಂತಾದವುಗಳು ವರ್ಣವಾಗಲು ಹೇಗೆ ಸಾಧ್ಯ' ಎಂದು ಪ್ರಶ್ನಿಸಿ ಸಮಾಧಾನವನ್ನು ಹೇಳಿದ್ದಾರೆ.

**ನಾದಾದಿಗಳು ವರ್ಣಗಳಲ್ಲ**

ಓಂಕಾರವು ಅಕಾರ, ಉಕಾರ, ಮಕಾರ ಎಂಬ ವರ್ಣೋಪೇತವಾಗಿದೆ ಎಂದು ಹೇಳಿದ್ದು ಸಮಂಜಸ. ಆದರೆ ನಾದ ಬಿಂದು ಘೋಷ ಶಾಂತ ಅತಿಶಾಂತಗಳು ವರ್ಣಗಳಲ್ಲ. ಕಿಂತು ವರ್ಣಧರ್ಮವಾಗಿವೆ. ನಾದಾದಿಗಳು ವರ್ಣವಾಗಿದ್ದರೆ 50ವರ್ಣಗಳಿಗಿಂತಲೂ ಅಧಿಕವಾಗ ಬೇಕಾದೀತು. ಆಚಾರ್ಯರು '**ಪಂಚಾಶದ್ವರ್ಣವಾಚ್ಯಶ್ಚ**' ಎಂದು ಇದೇ ತಂತ್ರಸಾರಸಂಗ್ರಹದಲ್ಲಿ

ಭಗವಂತನು 50 ವರ್ಣಗಳಿಂದ ವಾಚ್ಯನಾಗಿದ್ದಾನೆ ಎಂದು ಹೇಳಿದ್ದಾರೆ. ನಾದಾದಿಗಳೂ ವರ್ಣವಾಗಿದ್ದರೆ 50ಕ್ಕಿಂತಲೂ ಅಧಿಕವರ್ಣವಾದ್ದರಿಂದ '50ವರ್ಣಗಳಿಂದ ವಾಚ್ಯ' ಎಂದು ಹೇಳಿದ್ದು ಅನುಪಪನ್ನವಾಗುತ್ತದೆ.

ಪ್ರಣವಾಂಶವಾದ ನಾದಾದಿಗಳು ವರ್ಣವಾಗದಿದ್ದರೆ '**ಮದ್ರೂಪಾಣಾಂ ಚ ವಾಚಕಃ**' ಎಂದು ನಾದಾದಿಗಳು ವಿಶ್ವಾದಿರೂಪಗಳಿಗೆ ವಾಚಕವಾಗಿವೆ ಎಂದು ಹೇಳಿದ್ದು ಅನುಪಪನ್ನವಾಗುತ್ತದೆ. ಏಕೆಂದರೆ ವಾಚಕತ್ವವು ವರ್ಣದಧರ್ಮವಾಗಿದೆ. ನಾದಾದಿಗಳು ವರ್ಣವಲ್ಲ. ವಿಶ್ವಾದಿವಾಚಕತ್ವವು ನಾದಾದಿಗಳಿಗೆ ಉಪಪನ್ನವಾಗಬೇಕಾದರೆ ನಾದಾದಿಗಳನ್ನು ವರ್ಣವೆಂದು ಅಂಗೀಕರಿಸಬೇಕಲ್ಲವೆ ಎಂಬ ಪ್ರಶ್ನೆಯು ಅನುಪಪನ್ನ. ಏಕೆಂದರೆ ನಾದಾದಿಗಳು ವರ್ಣಧರ್ಮವಾಗಿವೆ ವಿನಹ ವರ್ಣವಲ್ಲ. ವರ್ಣವಾಗದೆ ವರ್ಣಧರ್ಮವಾದರೂ ಸಹ ನಾದಾದಿಗಳು ಉದಾತ್ತಾದಿಸ್ವರಗಳಂತೆ ವಾಚಕ ಎಂದು ಹೇಳಬಹುದು. ಉದಾತ್ತಾದಿಸ್ವರಗಳು ವರ್ಣವಲ್ಲ. ವರ್ಣಧರ್ಮವಾಗಿವೆ. ಆದರೂ ಸಹ ಅವುಗಳು ವಾಚಕ ಎಂದು ಆಚಾರ್ಯರು ಋಗ್ಭಾಷ್ಯದಲ್ಲಿ ಹೇಳಿದ್ದಾರೆ.

**ದಾರ್ಢ್ಯಮೇವಾನುದಾತ್ತಾರ್ಥ ಉದಾತ್ತಸ್ಯೋಚ್ಚತಾರ್ಥತಾ ।**
**ನೀಚತಾ ಸ್ವರಿತಸ್ಯಾರ್ಥಃ ಪ್ರಚಯಸ್ಯ ಯಥಾಸ್ಥಿತಿಃ ॥**
**ಸಮಾಹಾರೇಽಖಿಲಾ ಅರ್ಥಾಃ ಸ್ವರಾರ್ಥಾನಾಮಿಯಂ ಸ್ಥಿತಿಃ ॥ ಎಂದು.**

ನಾದಾದಿಗಳು ವರ್ಣಗಳಾಗದಿರುವದರಿಂದಲೇ ಆಚಾರ್ಯರು '**ಆದಿವರ್ಣತ್ರಯಂ**' ಎಂದು ಪ್ರಣವಮಂತ್ರದ ವರ್ಣನ್ಯಾಸವನ್ನು ಹೇಳುವ ಸಂದರ್ಭದಲ್ಲಿ ಅಕಾರ ಉಕಾರ ಮಕಾರ ಎಂಬ ವರ್ಣತ್ರಯಗಳಿಗೆ ಮಾತ್ರ ನ್ಯಾಸವನ್ನು ಹೇಳಿದ್ದಾರೆ. ನಾದಾದಿಗಳು ವರ್ಣವಾಗಿದ್ದರೆ ಅವುಗಳ ನ್ಯಾಸವನ್ನೂ ಸಹ ಹೇಳಬೇಕಿತ್ತು. '**ಸೋಽಯಮಷ್ಟಾಕ್ಷರೋ ಮತಃ**' ಎಂದು ನಾದಾದಿಗಳನ್ನು ವಾಚಕತ್ವವು ಸಮಾನವಾದ್ದರಿಂದ ಔಪಚಾರಿಕವಾಗಿ ವರ್ಣವೆಂದು ಹೇಳಿದ್ದಾರೆ. ಆದರೆ ನಾದಾದಿಗಳು ವರ್ಣವಲ್ಲ.

**ನಾದಾದಿಗಳು ವರ್ಣಧರ್ಮವಲ್ಲ ವರ್ಣಗಳು**

ನಾದಾದಿಗಳು ವರ್ಣವೇ ಆಗಿವೆ. ವರ್ಣಧರ್ಮವಲ್ಲ. ಆಚಾರ್ಯರು ಇದೇ ತಂತ್ರಸಾರಸಂಗ್ರಹದಲ್ಲಿ '**ಸೋಽಯಮಷ್ಟಾಕ್ಷರೋ ಮತಃ**'(1-3) '**ವರ್ಣಾಸ್ತಾರಾರ್ಣಭೇದಿತಾಃ**' (1-5) '**ತಾರೋಽಷ್ಟಾಕ್ಷರಭೇದವಾನ್**' (1-10) ಇತ್ಯಾದಿ ಅನೇಕಸ್ಥಳಗಳಲ್ಲಿ ಅಕಾರಾದಿಗಳಂತೆ ನಾದಾದಿಗಳನ್ನೂ ಸಹ 'ಅಕ್ಷರ' 'ಅರ್ಣ' ಎಂಬ ಶಬ್ದದಿಂದ ಉಲ್ಲೇಖಿಸಿದ್ದಾರೆ. ಆದ್ದರಿಂದ ನಾದಾದಿಗಳು ವರ್ಣವಾಗಿವೆ. '**ಆದ್ಯೈಸ್ತಾರಚತುರ್ವರ್ಣೈಃ**' '**ಆದಿವರ್ಣತ್ರಯಮ್**' ಎಂಬ ಸ್ಥಳದಲ್ಲಿ ಪ್ರಣವದ ಮೊದಲನೇಯ ನಾಲ್ಕು ಮತ್ತು ಮೊದಲನೇಯ ಮೂರು ವರ್ಣಗಳಿಂದ ಅಂಗನ್ಯಾಸವನ್ನು ಪ್ರಣವಮಂತ್ರಕ್ಕೆ ಹೇಳಿದ್ದಾರೆ. ಉಳಿದ ನಾದಾದಿಗಳು ವರ್ಣವಾದರೆ ಮಾತ್ರ ಮೊದಲನೇಯ ಮೂರು, ಮೊದಲನೇಯ ನಾಲ್ಕು ವರ್ಣಗಳು ಎಂದು ಸಜಾತೀಯಗಳಲ್ಲಿ ಹೇಳಲು ಬರುತ್ತದೆ. '**ಅಸ್ಯ ಗೋಃ ದ್ವಿತೀಯೋಽನ್ವೇಷ್ಟವ್ಯಃ**' ಈ ಗೋವಿಗೆ ಇನ್ನೊಂದು ಗೋವನ್ನು ಹುಡುಕಬೇಕು

ಎಂಬ ಸ್ಥಳದಲ್ಲಿ ಪ್ರಥಮಗೋವಿಗೆ ಸಜಾತೀಯವಾದ ಗೋ ಎಂಬ ಅರ್ಥವು ಬರುತ್ತದೆ. ಆದೇರೀತಿಯಾಗಿ ಮೊದಲನೇಯ ಮೂರು ವರ್ಣಗಳು ಎಂದು ಆಗಬೇಕಾದರೆ ಉಳಿದವುಗಳೂ ಸಹ ವರ್ಣವೇ ಆಗಿರಬೇಕು. ವರ್ಣ ಮತ್ತು ವರ್ಣವಾಗದಿರುವವುಗಳಲ್ಲಿ ಮೊದಲನೇಯ ಮೂರು ನಾಲ್ಕು ವರ್ಣಗಳು ಎಂದು ಹೇಳುವುದು ಅಸಂಗತವಾಗುತ್ತದೆ. ಆದ್ದರಿಂದ ನಾದಾದಿಗಳು ವರ್ಣವೇ ಆಗಿವೆ.

**ಚತುರ್ಥಪಾದೋ ಗಾಯತ್ರ್ಯಾಃ ಪ್ರಣವಃ ಸಮುದಾಹೃತಃ ।**
**ಅಕಾರಾದ್ಯತಿಶಾಂತಾಂತಃ ಪ್ರಣವೋಽಷ್ಟಾಕ್ಷರೋ ಮತಃ ॥**

ಎಂದು ಬೃಹದ್ಭಾಷ್ಯದಲ್ಲಿ ಗಾಯತ್ರಿಗೆ ಅಷ್ಟಾಕ್ಷರದಿಂದ ಕೂಡಿದ ನಾಲ್ಕು ಪಾದಗಳು ಇವೆ ಎಂದು ಹೇಳಲು ಪ್ರಣವಾಂಶವಾದ ನಾದಾದಿಗಳನ್ನು ಅಕ್ಷರ ಎಂದು ಅಂಗೀಕರಿಸಿ ಪ್ರಣವಮಂತ್ರವು ಎಂಟು ಅಕ್ಷರಗಳಿಂದ ಕೂಡಿದೆ ಎಂದು ಹೇಳಿದ್ದಾರೆ. ಆದ್ದರಿಂದ ನಾದಾದಿಗಳು ವರ್ಣವಾಗಿವೆ.

ಈ ಎಲ್ಲ ಪ್ರಮಾಣಗಳಲ್ಲಿ ವಾಚಕತ್ವವು ಸಮಾನವಾದ್ದರಿಂದ ನಾದಾದಿಗಳನ್ನು ವರ್ಣ ಎಂದು ಔಪಚಾರಿಕವಾಗಿ ವಿವಕ್ಷಿಸಿದ್ದಾರೆ ಎಂಬ ಶಂಕೆಯು ಸರಿಯಲ್ಲ. ಏಕೆಂದರೆ ನಾದಾದಿಗಳು ವರ್ಣವಾಗಿವೆ ಎಂಬ ವಿಷಯದಲ್ಲಿ ಅನೇಕಪ್ರಮಾಣಗಳನ್ನು ಪೂರ್ವದಲ್ಲಿ ಉದಾಹರಿಸಲಾಗಿದೆ. ಬಾಧಕವಾದದ್ದು ಯಾವುದೂ ಇಲ್ಲ. ಆದ್ದರಿಂದ ವರ್ಣತ್ವಪ್ರಯೋಗವನ್ನು ಔಪಚಾರಿಕ ಎಂದು ಹೇಳುವುದು ಸರಿಯಲ್ಲ.

ನಾದಾದಿಗಳನ್ನು ವರ್ಣ ಎಂದು ಹೇಳುವುದಾದರೆ ಈ ನಾದಾದಿಗಳು ಅಕಾರಾದಿ 50 ವರ್ಣಗಳಲ್ಲಿ ಅಂತರ್ಭೂತವಾಗದಿರುವದರಿಂದ 50ಕ್ಕಿಂತಲೂ ಅಧಿಕ ಎಂದು ಅಂಗೀಕರಿಸಬೇಕು. ಹಾಗೆ ಅಂಗೀಕರಿಸಿದರೆ ವರ್ಣಗಳು ಐವತ್ತಕ್ಕಿಂತಲೂ ಅಧಿಕವಾಗಿರುವದರಿಂದ '**ಪಂಚಾಶದ್ವರ್ಣ ವಾಚ್ಯಶ್ಚ**' 50ವರ್ಣಗಳಿಂದ ಭಗವದ್ರೂಪಗಳು ವಾಚ್ಯ ಎಂದು ಹೇಳುವ ವಾಕ್ಯದ ವಿರೋಧವು ಬರುತ್ತದೆ ಎಂಬ ಶಂಕೆಯೂ ಸರಿಯಲ್ಲ. ನಾದಾದಿಗಳು ವರ್ಣ ಎಂದಾದರೂ ಸಹ ಪೂರ್ವೋಕ್ತ ವಾಕ್ಯದ ವಿರೋಧವು ಇಲ್ಲ. ಏಕೆಂದರೆ '**ಪಂಚಾಶದ್ವರ್ಣವಾಚ್ಯಶ್ಚ**' ಎಂಬ ಸ್ಥಳದಲ್ಲಿ ಓಂಕಾರದಿಂದ ಅಭಿವ್ಯಕ್ತವಾದ ವರ್ಣಗಳು 50 ಎಂದು ವಿವಕ್ಷಿಸಿ ಆ ಪ್ರಮಾಣಗಳಲ್ಲಿ ಹೇಳಿದೆ. ಐವತ್ತೇ ವರ್ಣಗಳು ಎಂದು ಹೇಳುವದಾದರೆ ಇದೆ ತಂತ್ರಸಾರಸಂಗ್ರಹದಲ್ಲಿ '**ಏಕಪಂಚಾಶದ್ವರ್ಣಾನಾಂ**' '**ಮಾತೃಕಾ ಏಕಪಂಚಾಶತ್**' ಇತ್ಯಾದಿಗಳಲ್ಲಿ ಕ್ಷಕಾರವನ್ನು ಸೇರಿಸಿ 51 ವರ್ಣಗಳು ಎಂದು ಹೇಳಿದ್ದು ಅನುಪಪನ್ನವಾಗುತ್ತದೆ. ಓಂಕಾರದಿಂದ ಅಭಿವ್ಯಕ್ತವಾದ ವರ್ಣಗಳು ಐವತ್ತು. ಕ್ಷಕಾರವು ಓಂಕಾರದಿಂದ ಅಭಿವ್ಯಕ್ತವಾದ ಕಕಾರ ಷಕಾರ ಸಂಯೋಗದಿಂದ ಉಂಟಾದ ಅಕ್ಷರ ಎಂದು ವಿವಕ್ಷಿಸಿ '**ಪಂಚಾಶದ್ವರ್ಣವಾಚ್ಯಶ್ಚ**' ಎಂಬ ವಾಕ್ಯದ ವಿರೋಧವನ್ನು ಪರಿಹರಿಸಬೇಕು. ಪ್ರಕೃತದಲ್ಲಿಯೂ ಸಹ ಓಂಕಾರದಿಂಡ ಅಭಿವ್ಯಕ್ತವಾಗದ ನಾದಾದಿಗಳೂ ಸಹ 50ಕ್ಕಿಂತಲೂ ಅಧಿಕವರ್ಣಗಳು ಎಂದು ಹೇಳಿ ವಿರೋಧವನ್ನು ಪರಿಹರಿಸಲು ಬರುತ್ತದೆ. ಕರ್ಮನಿರ್ಣಯಟೀಕಾದಲ್ಲಿಯೂ ಸಹ '**ಗರ್ಗರಗೋಧಾಪಿಂಗಾದೀನಾಂ ಘೋಷಾ ಅಪಿ ನಾದಮಾತ್ರವ್ಯಂಜಕತ್ವೇನ ಭಗವದ್ವಾಚಕಾ ಏವ**' ಎಂಬ ವಾಕ್ಯವನ್ನು ವ್ಯಾಖ್ಯಾನಿಸುವಾಗ '**ಘೋಷಾಣಾಮಕಾರಾದಿಪಂಚಾಶದಕ್ಷರಾವ್ಯಂಜಕತ್ವೇನ**

**ತದತಿರಿಕ್ತಃ ಘೋಷವ್ಯಂಗ್ಯಃ ನಾದೋ ನಾಮ ವರ್ಣೋ ಮಂತ್ರಶಾಸ್ತ್ರೇ ಪ್ರಸಿದ್ಧಃ'** ಘೋಷಾದಿಗಳು ಅಕಾರಾದಿ ವರ್ಣಗಳಿಗೆ ವ್ಯಂಜಕವಾಗದಿದ್ದರೂ ಸಹ ಅಕಾರಾದಿಗಳಿಂದ ಅತಿರಿಕ್ತವಾದ ಘೋಷವ್ಯಂಗ್ಯವಾದ ನಾದ ಎಂಬ ವರ್ಣವು ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ ಎಂದು ಟೀಕಾಚಾರ್ಯರು ನಾದಾದಿಗಳನ್ನು ವರ್ಣ ಎಂದು ಸಮರ್ಥಿಸಿದ್ದಾರೆ.

ನಾದಾದಿಗಳು ವರ್ಣವಾಗಿದ್ದರೆ ಪ್ರಣವಮಂತ್ರದ ಅಕ್ಷರನ್ಯಾಸವನ್ನು ಹೇಳುವ ಸಂದರ್ಭದಲ್ಲಿ ನಾದಾದಿಗಳ ನ್ಯಾಸವನ್ನು ಹೇಳದೇ ಅಕಾರಾದಿವರ್ಣಗಳ ನ್ಯಾಸವನ್ನು ಹೇಳಲು ಕಾರಣವೇನು? ಎಂದರೆ,

**ಹ್ರಸ್ವಃ ಕೃಪಾಲುಃ ಸೇತಶ್ಚ ಸ್ವಯಮನ್ಯಃ ಸ್ವಯಂ ತಥಾ ।**
**ಸತಾರೋಽಷ್ಟಾಕ್ಷರಃ ಸೌರಃ ಕ್ರಮವ್ಯುತ್ಕ್ರಮತಃ ಪದೈಃ ।**
**ಅಂಗಾನಿ..................................॥ (4-89)**

ಎಂಬ 'ಓಂ ಘೃಣಿಃ ಸೂರ್ಯ ಆದಿತ್ಯಃ' ಎಂಬ ಸೂರ್ಯಾಷ್ಟಾಕ್ಷರಮಂತ್ರದಲ್ಲಿ ಓಂಕಾರದ ನ್ಯಾಸವನ್ನು ಹೇಳದೇ 'ಘೃಣಿಃ' ಮುಂತಾದ ಮೂರು ಪಾದಗಳ ನ್ಯಾಸವನ್ನು ಮಾತ್ರ ಕ್ರಮವ್ಯುತ್ಕ್ರಮದಿಂದ ಹೇಳಿದಂತೆ ಇಲ್ಲಿಯೂ ಸಹ ನಾದಾದಿಗಳು ವರ್ಣವಾದರೂ ಅವುಗಳ ನ್ಯಾಸವನ್ನು ಹೇಳದೇ ಅಕಾರದಿವರ್ಣತ್ರಯಗಳ ನ್ಯಾಸವನ್ನು ಮಾತ್ರ ಆಚಾರ್ಯರು ಹೇಳಿರುವರು. ಸ್ವತಂತ್ರರಾದ ಸರ್ವಜ್ಞರಾದ ಆಚಾರ್ಯರು ನಾದಾದಿವರ್ಣಗಳ ನ್ಯಾಸವನ್ನು ಹೇಳದಿರುವುದಕ್ಕೆ ಕಾರಣವನ್ನು ಈಗಿರುವ ಅಲ್ಪಜ್ಞರಾದ ನಮ್ಮಿಂದ ತಿಳಿಯಲು ಸಾಧ್ಯವಿಲ್ಲ.

ಕೆಲವರು ನಾದಾದಿಗಳ ನ್ಯಾಸವನ್ನು ಆಚಾರ್ಯರು ಹೇಳದಿರಲು ಕಾರಣವನ್ನು ಇಂತು ಹೇಳುತ್ತಾರೆ. ನಾದಾದಿಗಳು ವರ್ಣವಾದರೂ ಸಹ ಅಕಾರಾದಿಗಳಂತೆ ಪ್ರತ್ಯೇಕವಾಗಿ ಉಚ್ಚಾರಣೆಯಲ್ಲಿ ವಿಷಯವಾಗದಿರುವದರಿಂದ (ಉಚ್ಚರಿಸದಿರುವದರಿಂದ) ನಾದಾದಿಗಳ ನ್ಯಾಸವನ್ನು ಆಚಾರ್ಯರು ಹೇಳಿಲ್ಲ. ಸ್ವತಂತ್ರವಾಗಿ ಉಚ್ಚಾರಣೆವಿಷಯವಾದ ಅಕಾರ, ಉಕಾರ, ಮಕಾರ ಎಂಬ ವರ್ಣಗಳ ನ್ಯಾಸವನ್ನು ಮಾತ್ರ ಆಚಾರ್ಯರು ಹೇಳಿರುವರು ಎಂದು. ಆದರೆ ಈ ಸಮಾಧಾನವು ಸರಿಯಲ್ಲ. ಏಕೆಂದರೆ ಪ್ರತ್ಯೇಕವಾಗಿ ಉಚ್ಚರಿಸುವ ವರ್ಣಕ್ಕೆ ನ್ಯಾಸವನ್ನು ಹೇಳಬೇಕು ಎಂದು ಅರ್ಥವಾಗುತ್ತದೆ. ಆದರೆ 'ಓಂ ಘೃಣಿಃ ಸೂರ್ಯ ಆದಿತ್ಯಃ' ಎಂಬ ಸೂರ್ಯಮಂತ್ರದಲ್ಲಿ ಓಂಕಾರವು ಪೃಥುಗುಚ್ಚರಿತವಾದ್ದರಿಂದ ಅದರ ನ್ಯಾಸವನ್ನು ಆಚಾರ್ಯರು ಹೇಳಬೇಕಿತ್ತು ಎಂಬ ಆಕ್ಷೇಪವು ಬರುತ್ತದೆ. ಅಷ್ಟೇ ಅಲ್ಲದೇ ಚತುರ್ಥಾಧ್ಯಾಯದಲ್ಲಿ 'ಪಾದಪೃತ್ಕೇಷು' ಎಂಬ ಏಕಾಕ್ಷರಾದಿ ಸರ್ವಮಂತ್ರಗಳಿಗೆ ನ್ಯಾಸವನ್ನು ಹೇಳುವ ಸಂದರ್ಭದಲ್ಲಿ ಏಕಾಕ್ಷರ ಬೀಜಮಂತ್ರಗಳಿಗೆ ವ್ಯಂಜನ ಸ್ವರ ಬಿಂದು ಎಂದು ಪ್ರತ್ಯೇಕಿಸಿ ನ್ಯಾಸವನ್ನು ಮಾಡಬೇಕು ಎಂಮು ಹೇಳಿದ್ದಾರೆ. ಆದರೆ ವ್ಯಂಜನ ಸ್ವರ ಬಿಂದುಗಳನ್ನು ಪೃಥಕ್ ಉಚ್ಚರಿಸುವದಿಲ್ಲ. ಆದರೂ ಅವುಗಳಿಗೆ ನ್ಯಾಸವನ್ನು ಹೇಳಿದ್ದಾರೆ. ಆದರಂತೇ ಇಲ್ಲಿಯೂ ಸಹ ಪೃಥುಗುಚ್ಚಾರಣವಿಷಯವಾಗದಿದ್ದರೂ ಸಹ ನಾದಾದಿಗಳ ನ್ಯಾಸವನ್ನು ಹೇಳಬಹುದಿತ್ತು ಎಂಬ ಆಕ್ಷೇಪವು ಬರುತ್ತದೆ.

ಎಂಬ ಸ್ಥಳದಲ್ಲಿ ಪ್ರಥಮಗೋವಿಗೆ ಸಜಾತೀಯವಾದ ಗೋ ಎಂಬ ಅರ್ಥವು ಬರುತ್ತದೆ. ಅದೇರೀತಿಯಾಗಿ ಮೊದಲನೇಯ ಮೂರು ವರ್ಣಗಳು ಎಂದು ಆಗಬೇಕಾದರೆ ಉಳಿದವುಗಳೂ ಸಹ ವರ್ಣವೇ ಆಗಿರಬೇಕು. ವರ್ಣ ಮತ್ತು ವರ್ಣವಾಗದಿರುವವುಗಳಲ್ಲಿ ಮೊದಲನೇಯ ಮೂರು ನಾಲ್ಕು ವರ್ಣಗಳು ಎಂದು ಹೇಳುವುದು ಅಸಂಗತವಾಗುತ್ತದೆ. ಆದ್ದರಿಂದ ನಾದಾದಿಗಳು ವರ್ಣವೇ ಆಗಿವೆ.

**ಚತುರ್ಥಪಾದೋ ಗಾಯತ್ರ್ಯಾಃ ಪ್ರಣವಃ ಸಮುದಾಹೃತಃ ।**
**ಅಕಾರಾದ್ಯತಿಶಾಂತಾಂತಃ ಪ್ರಣವೋऽಷ್ಟಾಕ್ಷರೋ ಮತಃ ॥**

ಎಂದು ಬೃಹದ್ಭಾಷ್ಯದಲ್ಲಿ ಗಾಯತ್ರಿಗೆ ಅಷ್ಟಾಕ್ಷರದಿಂದ ಕೂಡಿದ ನಾಲ್ಕು ಪಾದಗಳು ಇವೆ ಎಂದು ಹೇಳಲು ಪ್ರಣವಾಂಶವಾದ ನಾದಾದಿಗಳನ್ನು ಅಕ್ಷರ ಎಂದು ಅಂಗೀಕರಿಸಿ ಪ್ರಣವಮಂತ್ರವು ಎಂಟು ಅಕ್ಷರಗಳಿಂದ ಕೂಡಿದೆ ಎಂದು ಹೇಳಿದ್ದಾರೆ. ಆದ್ದರಿಂದ ನಾದಾದಿಗಳು ವರ್ಣವಾಗಿವೆ.

ಈ ಎಲ್ಲ ಪ್ರಮಾಣಗಳಲ್ಲಿ ವಾಚಕತ್ವವು ಸಮಾನವಾದ್ದರಿಂದ ನಾದಾದಿಗಳನ್ನು ವರ್ಣ ಎಂದು ಔಪಚಾರಿಕವಾಗಿ ವಿವಕ್ಷಿಸಿದ್ದಾರೆ ಎಂಬ ಶಂಕೆಯು ಸರಿಯಲ್ಲ. ಏಕೆಂದರೆ ನಾದಾದಿಗಳು ವರ್ಣವಾಗಿವೆ ಎಂಬ ವಿಷಯದಲ್ಲಿ ಅನೇಕಪ್ರಮಾಣಗಳನ್ನು ಪೂರ್ವದಲ್ಲಿ ಉದಾಹರಿಸಲಾಗಿದೆ. ಬಾಧಕವಾದದ್ದು ಯಾವುದೂ ಇಲ್ಲ. ಆದ್ದರಿಂದ ವರ್ಣತ್ವಪ್ರಯೋಗವನ್ನು ಔಪಚಾರಿಕ ಎಂದು ಹೇಳುವುದು ಸರಿಯಲ್ಲ.

ನಾದಾದಿಗಳನ್ನು ವರ್ಣ ಎಂದು ಹೇಳುವುದಾದರೆ ಈ ನಾದಾದಿಗಳು ಅಕಾರಾದಿ 50 ವರ್ಣಗಳಲ್ಲಿ ಅಂತರ್ಭೂತವಾಗದಿರುವದರಿಂದ 50ಕ್ಕಿಂತಲೂ ಅಧಿಕ ಎಂದು ಅಂಗೀಕರಿಸಬೇಕು. ಹಾಗೆ ಅಂಗೀಕರಿಸಿದರೆ ವರ್ಣಗಳು ಐವತ್ತಕ್ಕಿಂತಲೂ ಅಧಿಕವಾಗಿರುವದರಿಂದ '**ಪಂಚಾಶದ್ವರ್ಣ ವಾಚ್ಯಶ್ಚ**' 50ವರ್ಣಗಳಿಂದ ಭಗವದ್ರೂಪಗಳು ವಾಚ್ಯ ಎಂದು ಹೇಳುವ ವಾಕ್ಯದ ವಿರೋಧವು ಬರುತ್ತದೆ ಎಂಬ ಶಂಕೆಯೂ ಸರಿಯಲ್ಲ. ನಾದಾದಿಗಳು ವರ್ಣ ಎಂದಾದರೂ ಸಹ ಪೂರ್ವೋಕ್ತ ವಾಕ್ಯದ ವಿರೋಧವು ಇಲ್ಲ. ಏಕೆಂದರೆ '**ಪಂಚಾಶದ್ವರ್ಣವಾಚ್ಯಶ್ಚ**' ಎಂಬ ಸ್ಥಳದಲ್ಲಿ ಓಂಕಾರದಿಂದ ಅಭಿವ್ಯಕ್ತವಾದ ವರ್ಣಗಳು 50 ಎಂದು ವಿವಕ್ಷಿಸಿ ಆ ಪ್ರಮಾಣಗಳಲ್ಲಿ ಹೇಳಿದೆ. ಐವತ್ತೇ ವರ್ಣಗಳು ಎಂದು ಹೇಳುವದಾದರೆ ಇದೆ ತಂತ್ರಸಾರಸಂಗ್ರಹದಲ್ಲಿ '**ಏಕಪಂಚಾಶದ್ವರ್ಣಾನಾಂ**' '**ಮಾತೃಕಾ ಏಕಪಂಚಾಶತ್**' ಇತ್ಯಾದಿಗಳಲ್ಲಿ ಕ್ಷಕಾರವನ್ನು ಸೇರಿಸಿ 51 ವರ್ಣಗಳು ಎಂದು ಹೇಳಿದ್ದು ಅನುಪಪನ್ನವಾಗುತ್ತದೆ. ಓಂಕಾರದಿಂದ ಅಭಿವ್ಯಕ್ತವಾದ ವರ್ಣಗಳು ಐವತ್ತು. ಕ್ಷಕಾರವು ಓಂಕಾರದಿಂದ ಅಭಿವ್ಯಕ್ತವಾದ ಕಕಾರ ಷಕಾರ ಸಂಯೋಗದಿಂದ ಉಂಟಾದ ಅಕ್ಷರ ಎಂದು ವಿವಕ್ಷಿಸಿ '**ಪಂಚಾಶದ್ವರ್ಣವಾಚ್ಯಶ್ಚ**' ಎಂಬ ವಾಕ್ಯದ ವಿರೋಧವನ್ನು ಪರಿಹರಿಸಬೇಕು. ಪ್ರಕೃತದಲ್ಲಿಯೂ ಸಹ ಓಂಕಾರದಿಂದ ಅಭಿವ್ಯಕ್ತವಾಗದ ನಾದಾದಿಗಳೂ ಸಹ 50ಕ್ಕಿಂತಲೂ ಅಧಿಕವರ್ಣಗಳು ಎಂದು ಹೇಳಿ ವಿರೋಧವನ್ನು ಪರಿಹರಿಸಲು ಬರುತ್ತದೆ. ಕರ್ಮನಿರ್ಣಯಟೀಕಾದಲ್ಲಿಯೂ ಸಹ '**ಗರ್ಗರಗೋಧಾಪಿಂಗಾದೀನಾಂ ಘೋಷಾ ಅಪಿ ನಾದಮಾತ್ರವ್ಯಂಜಕತ್ವೇನ ಭಗವದ್ವಾಚಕಾ ಏವ**' ಎಂಬ ವಾಕ್ಯವನ್ನು ವ್ಯಾಖ್ಯಾನಿಸುವಾಗ '**ಘೋಷಾಣಾಮಕಾರಾದಿಪಂಚಾಶದಕ್ಷರಾವ್ಯಂಜಕತ್ವೇನ**

ತದತಿರಿಕ್ತಃ ಘೋಷವ್ಯಂಗ್ಯಃ ನಾದೋ ನಾಮ ವರ್ಣೋ ಮಂತ್ರಶಾಸ್ತ್ರೇ ಪ್ರಸಿದ್ಧಃ' ಘೋಷಾದಿಗಳು ಅಕಾರಾದಿ ವರ್ಣಗಳಿಗೆ ವ್ಯಂಜಕವಾಗದಿದ್ದರೂ ಸಹ ಅಕಾರಾದಿಗಳಿಂದ ಅತಿರಿಕ್ತವಾದ ಘೋಷವ್ಯಂಗ್ಯವಾದ ನಾದ ಎಂಬ ವರ್ಣವು ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ ಎಂದು ಟೀಕಾಚಾರ್ಯರು ನಾದಾದಿಗಳನ್ನು ವರ್ಣ ಎಂದು ಸಮರ್ಥಿಸಿದ್ದಾರೆ.

ನಾದಾದಿಗಳು ವರ್ಣವಾಗಿದ್ದರೆ ಪ್ರಣವಮಂತ್ರದ ಅಕ್ಷರನ್ಯಾಸವನ್ನು ಹೇಳುವ ಸಂದರ್ಭದಲ್ಲಿ ನಾದಾದಿಗಳ ನ್ಯಾಸವನ್ನು ಹೇಳದೇ ಅಕಾರಾದಿವರ್ಣಗಳ ನ್ಯಾಸವನ್ನು ಹೇಳಲು ಕಾರಣವೇನು? ಎಂದರೆ,

**ಹ್ರಸ್ವಃ ಕೃಪಾಲುಃ ಸೇತಶ್ಚ ಸ್ವಯಮನ್ಯಃ ಸ್ವಯಂ ತಥಾ ।**
**ಸತಾರೋಽಷ್ಟಾಕ್ಷರಃ ಸೌರಃ ಕ್ರಮವ್ಯುತ್ಕ್ರಮತಃ ಪದೈಃ ।**
**ಅಂಗಾನಿ.................................॥ (4-89)**

ಎಂಬ 'ಓಂ ಘೃಣಿಃ ಸೂರ್ಯ ಆದಿತ್ಯಃ' ಎಂಬ ಸೂರ್ಯಾಷ್ಟಾಕ್ಷರಮಂತ್ರದಲ್ಲಿ ಓಂಕಾರದ ನ್ಯಾಸವನ್ನು ಹೇಳದೇ 'ಘೃಣಿಃ' ಮುಂತಾದ ಮೂರು ಪಾದಗಳ ನ್ಯಾಸವನ್ನು ಮಾತ್ರ ಕ್ರಮವ್ಯುತ್ಕ್ರಮದಿಂದ ಹೇಳಿದಂತೆ ಇಲ್ಲಿಯೂ ಸಹ ನಾದಾದಿಗಳು ವರ್ಣವಾದರೂ ಅವುಗಳ ನ್ಯಾಸವನ್ನು ಹೇಳದೇ ಅಕಾರದಿವರ್ಣತ್ರಯಗಳ ನ್ಯಾಸವನ್ನು ಮಾತ್ರ ಆಚಾರ್ಯರು ಹೇಳಿರುವರು. ಸ್ವತಂತ್ರರಾದ ಸರ್ವಜ್ಞರಾದ ಆಚಾರ್ಯರು ನಾದಾದಿವರ್ಣಗಳ ನ್ಯಾಸವನ್ನು ಹೇಳದಿರುವುದಕ್ಕೆ ಕಾರಣವನ್ನು ಈಗಿರುವ ಅಲ್ಪಜ್ಞರಾದ ನಮ್ಮಿಂದ ತಿಳಿಯಲು ಸಾಧ್ಯವಿಲ್ಲ.

ಕೆಲವರು ನಾದಾದಿಗಳ ನ್ಯಾಸವನ್ನು ಆಚಾರ್ಯರು ಹೇಳದಿರಲು ಕಾರಣವನ್ನು ಇಂತು ಹೇಳುತ್ತಾರೆ. ನಾದಾದಿಗಳು ವರ್ಣವಾದರೂ ಸಹ ಅಕಾರಾದಿಗಳಂತೆ ಪ್ರತ್ಯೇಕವಾಗಿ ಉಚ್ಚಾರಣೆಯಲ್ಲಿ ವಿಷಯವಾಗದಿರುವದರಿಂದ (ಉಚ್ಚರಿಸದಿರುವದರಿಂದ) ನಾದಾದಿಗಳ ನ್ಯಾಸವನ್ನು ಆಚಾರ್ಯರು ಹೇಳಿಲ್ಲ. ಸ್ವತಂತ್ರವಾಗಿ ಉಚ್ಚಾರಣೆವಿಷಯವಾದ ಅಕಾರ, ಉಕಾರ, ಮಕಾರ ಎಂಬ ವರ್ಣಗಳ ನ್ಯಾಸವನ್ನು ಮಾತ್ರ ಆಚಾರ್ಯರು ಹೇಳಿರುವರು ಎಂದು. ಆದರೆ ಈ ಸಮಾಧಾನವು ಸರಿಯಲ್ಲ. ಏಕೆಂದರೆ ಪ್ರತ್ಯೇಕವಾಗಿ ಉಚ್ಚರಿಸುವ ವರ್ಣಕ್ಕೆ ನ್ಯಾಸವನ್ನು ಹೇಳಬೇಕು ಎಂದು ಅರ್ಥವಾಗುತ್ತದೆ. ಆದರೆ 'ಓಂ ಘೃಣಿಃ ಸೂರ್ಯ ಆದಿತ್ಯಃ' ಎಂಬ ಸೂರ್ಯಮಂತ್ರದಲ್ಲಿ ಓಂಕಾರವು ಪೃಥುಗುಚ್ಚರಿತವಾದ್ದರಿಂದ ಆದರ ನ್ಯಾಸವನ್ನು ಆಚಾರ್ಯರು ಹೇಳಬೇಕಿತ್ತು ಎಂಬ ಆಕ್ಷೇಪವು ಬರುತ್ತದೆ. ಅಷ್ಟೇ ಅಲ್ಲದೇ ಚತುರ್ಥಾಧ್ಯಾಯದಲ್ಲಿ 'ಪಾದಪೃತ್ಕೇಷು' ಎಂಬ ಏಕಾಕ್ಷರಾದಿ ಸರ್ವಮಂತ್ರಗಳಿಗೆ ನ್ಯಾಸವನ್ನು ಹೇಳುವ ಸಂದರ್ಭದಲ್ಲಿ ಏಕಾಕ್ಷರ ಬೀಜಮಂತ್ರಗಳಿಗೆ ವ್ಯಂಜನ ಸ್ವರ ಬಿಂದು ಎಂದು ಪ್ರತ್ಯೇಕಿಸಿ ನ್ಯಾಸವನ್ನು ಮಾಡಬೇಕು ಎಂದು ಹೇಳಿದ್ದಾರೆ. ಆದರೆ ವ್ಯಂಜನ ಸ್ವರ ಬಿಂದುಗಳನ್ನು ಪೃಥಕ್ ಉಚ್ಚರಿಸುವದಿಲ್ಲ. ಆದರೂ ಅವುಗಳಿಗೆ ನ್ಯಾಸವನ್ನು ಹೇಳಿದ್ದಾರೆ. ಅದರಂತೇ ಇಲ್ಲಿಯೂ ಸಹ ಪೃಥುಗುಚ್ಚಾರಣವಿಷಯವಾಗದಿದ್ದರೂ ಸಹ ನಾದಾದಿಗಳ ನ್ಯಾಸವನ್ನು ಹೇಳಬಹುದಿತ್ತು ಎಂಬ ಆಕ್ಷೇಪವು ಬರುತ್ತದೆ.

**ನ್ಯಾಸ ಏಕಾಕ್ಷರೇ ಮಂತ್ರೇ ವ್ಯಂಜನಸ್ವರಬಿಂದುಭಿಃ ।**
**ಪಾದಹೃತ್ಕೇಷು ವಿಲಯೇ ವ್ಯುತ್ಪತ್ತೌ ವ್ಯುತ್ಕಮಾತ್ ಭವೇತ್ ॥**

ಎಂದು ಸಂಗ್ರಹದಲ್ಲಿಯೂ ಸಹ ಏಕಾಕ್ಷರಮಂತ್ರದಲ್ಲಿ ವಂಜನ ಸ್ವರ ಬಿಂದುಗಳೆಂದು ಬೇರ್ಪಡಿಸಿ ಪಾದ ಹೃದಯ ಮಸ್ತಕದಲ್ಲಿ ನ್ಯಾಸವನ್ನು ಮಾಡಬೇಕು ಎಂದು ಹೇಳಿದ್ದಾರೆ. ಆದ್ದರಿಂದ ಇಲ್ಲಿ ನಾದಾದಿಗಳ ನ್ಯಾಸವು ಅನಾವಶ್ಯಕವಾಗಿದೆ ಎಂಬ ಕಾರಣದಿಂದಲೇ ಆಚಾರ್ಯರು ಇಲ್ಲಿ ನಾದಾದಿಗಳು ವರ್ಣವಾದರೂ ಸಹ ಅವುಗಳ ನ್ಯಾಸವನ್ನು ಹೇಳಿಲ್ಲ ಎಂದೇ ಸಮಾಧಾನವನ್ನು ಹೇಳಬೇಕು.

ಅಥವಾ, ಮನುಷ್ಯರಿಗೆ ನಾದಾದಿಗಳ ನ್ಯಾಸವನ್ನು ಮಾಡುವ ಅಧಿಕಾರವಿಲ್ಲದಿರುವದರಿಂದ ನಾದಾದಿಗಳ ನ್ಯಾಸವನ್ನು ಆಚಾರ್ಯರು ಇಲ್ಲಿ ಹೇಳಿಲ್ಲ ಎಂದು ಸಮಾಧಾನವನ್ನು ಹೇಳಬಹುದು. ಹೇಗೆಂದರೆ, ಪ್ರಣವಮಂತ್ರಗಳು ತ್ರಿಮಾತ್ರದಿಂದ ಆರಂಭಿಸಿ ಒಂದೊಂದು ಮಾತ್ರಗಳ ಅಭಿವೃದ್ಧಿಯಿಂದ ಚತುರ್ಮಾತ್ರಾ, ಮಂಚಮಾತ್ರಾ ಇತ್ಯಾದಿಯಾಗಿ ಅನಂತಮಾತ್ರಾವಸನಕವಾಗಿ ಅನಂತವಾಗಿವೆ.

**ತ್ರಿಮಾತ್ರಮಾದಿತಃ ಕೃತ್ವಾ ಯಾವಚ್ಚಾನಂತಮಾತ್ರಕಾಃ ।**
**ಪ್ರಣವಾಸ್ತೇ ವಿಭೇದೇನ ಹ್ಯನಂತಾ ಪರಿಕೀರ್ತಿತಾಃ ।**
**ಏಕಮಾತ್ರೋತ್ತರಾಃ ಸರ್ವೇ...............॥**

ಎಂದು ಭಾಗವತ ತಾತ್ಪರ್ಯದ ಏಕಾದಶಸ್ಕಂಧದಲ್ಲಿ ಆಚಾರ್ಯರು ಹೇಳಿದ್ದಾರೆ. ಮಧ್ವವಿಜಯದಲ್ಲಿಯೂ ಸಹ **'ಅನಂತಮಾತ್ರಾಂತಮುದಾಹರಂತಿ ಯಂ ತ್ರಿಮಾತ್ರಪೂರ್ವಂ ಪ್ರಣವೋಚ್ಚಯಂ ಬುಧಾಃ'** (4-32) ಎಂದು ನಾರಾಯಣಪಂಡಿತಾಚಾರ್ಯರೂ ಸಹ ಪ್ರಣವಂತ್ರಗಳು ತ್ರಿಮಾತ್ರಪೂರ್ವಕವಾಗಿ ಅನಂತಮಾತ್ರಾಂತವಾಗಿವೆ ಎಂದು ಹಳಿದ್ದಾರೆ. ಹೀಗೆ ಅನಂತವಾದ ಪ್ರಣವಮಂತ್ರಗಳಲ್ಲಿ ತ್ರಿಮಾತ್ರಕವಾದ ಪ್ರಣವಮಂತ್ರವನ್ನುಮಾತ್ರ ಜಪಿಸುವ ಅಧಿಕಾರ ಮನುಷ್ಯರಿಗೆ ಇದೆ. ಆದ್ದರಿಂದ ಈ ತಂತ್ರಸಾರಸಂಗ್ರಹದಲ್ಲಿ ಮನುಷ್ಯಾಧಿಕಾರಿಕವಾದ ತ್ರಿಮಾತ್ರಪ್ರಣವಮಂತ್ರದ ನ್ಯಾಸವನ್ನು ಮಾತ್ರ ಹೇಳಿದ್ದಾರೆ. ನ್ಯಾಸವು ಜಪಕ್ಕಾಗಿರುವದರಿಂದ ಜಪ್ಯವಾದ ಮಂತ್ರಗಳ ನ್ಯಾಸವನ್ನು ಹೇಳಬೇಕಾದ್ದರಿಂದ ಆಚಾರ್ಯರು ಮನುಷ್ಯಾಧಿಕಾರಿಕವಾದ ವರ್ಣತ್ರಯಗಳ ನ್ಯಾಸವನ್ನು ಹೇಳಿದ್ದಾರೆ. ಉಳಿದ ಪ್ರಣವಮಂತ್ರಗಳಲ್ಲಿ ಬ್ರಹ್ಮಾದ್ಯಂತ ದೇವತೆಗಳು ಅಧಿಕಾರಿಗಳಾಗಿದ್ದಾರೆ. ಷಡಕ್ಷರ ಸಪ್ತಾಕ್ಷರ ಅಷ್ಟಾಕ್ಷರಭೇದದಿಂದ ಭಿನ್ನವಾದ ಅನೇಕವಿಧವಾದ ಹಂಸಮಂತ್ರಗಳಲ್ಲಿ ಸಪ್ತಾಕ್ಷರ ಹಂಸಮಂತ್ರವು **'ತಾರಯೋಗೋಽಪ್ಯೇವಮೇವ ಬ್ರಹ್ಮಾದಾವೇವ ವರ್ತತೇ'** (4-23) ಎಂದು ಬ್ರಹ್ಮಾಧಿಕಾರಿಕವಾಗಿದೆ ಎಂದು ಹೇಳಿ ಮನುಷ್ಯಾಧಿಕಾರಿಕವಾದ ಷಡಕ್ಷರ ಅಷ್ಟಾಕ್ಷರ ಹಂಸಮಂತ್ರಗಳ ನ್ಯಾಸವನ್ನು ಮಾತ್ರ ಆಚಾರ್ಯರು ತುರೀಯಾಧ್ಯಾಯದಲ್ಲಿ ಹೇಳಿದ್ದಾರೆ. ಅದೇರೀತಿಯಾಗಿ ಇಲ್ಲಿಯೂ ಸಹ ಮನುಷ್ಯಾಧಿಕಾರಿಕವಾದ ಪ್ರಣವಮಂತ್ರದ ನ್ಯಾಸವನ್ನು ಮಾತ್ರ ಆಚಾರ್ಯರು ಹೇಳಿರುವರು. ನಾದಾದಿಮಾತ್ರೋಪೇತವಾದ ಪ್ರಣವಮಂತ್ರಜಪದ ಅಧಿಕಾರವು ಮನುಷ್ಯರಿಗೆ ಇಲ್ಲದಿರುವದರಿಂದ ನಾದಾದಿಗಳು ವರ್ಣವಾದರೂ ಸಹ ಅವುಗಳ ನ್ಯಾಸವನ್ನು ಆಚಾರ್ಯರು ಹೇಳಿಲ್ಲ ಎಂದು ಸಮಾಧಾನವನ್ನು ಹೇಳಲು ಬರುತ್ತದೆ.

ಮನುಷ್ಯಾಧಿಕಾರಿಕವಾದ ನ್ಯಾಸವನ್ನು ಹೇಳುವದಿದ್ದರೆ ಮನುಷ್ಯಾಧಿಕಾರಿಕವಾದ ತ್ರಿಮಾತ್ರವಾದ ಓಂಕಾರವನ್ನು ಮಾತ್ರ ಆಚಾರ್ಯರು ಹೇಳಬೇಕಿತ್ತು. ಅಷ್ಟಾಕ್ಷರೋಪೇತವಾದ ಪ್ರಣವಮಂತ್ರವನ್ನು ಆಚಾರ್ಯರು ಹೇಳಲು ಕಾರಣವೇನು ಎಂದು ಶಂಕಿಸುವಂತಿಲ್ಲ. ಏಕೆಂದರೆ ಇಲ್ಲಿ ಪ್ರಥಮತಃ ಮಂತ್ರಗಳ ಅಭಿವ್ಯಕ್ತಿಕ್ರಮವನ್ನು ಹೇಳುತ್ತಿರುವರು. ಅಭಿವ್ಯಕ್ತಿಪ್ರಕರಣವನ್ನು ಹೇಳುವ ಸಂದರ್ಭದಲ್ಲಿ ಅಷ್ಟವರ್ಣೋಪೇತವಾದ ಪ್ರಣವದ ಅಭಿವ್ಯಕ್ತಿಯನ್ನು ಆಚಾರ್ಯರು ಹೇಳಿದ್ದಾರೆ. ಜಪಪ್ರಕರಣದಲ್ಲಿ ತ್ರಿಮಾತ್ರಕವಾದ ಪ್ರಣವದ ಉಪಯೋಗವೇ ಇದೆ ಎಂದು ತಿಳಿಸಲು 'ಆದಿವರ್ಣತ್ರಯಮ್' ಎಂದು ಮೂರು ವರ್ಣಗಳ ನ್ಯಾಸವನ್ನು ಮಾತ್ರ ಆಚಾರ್ಯರು ಹೇಳಿದ್ದಾರೆ. ಆದ್ದರಿಂದ ನಾದಾದಿಗಳು ವರ್ಣಧರ್ಮವಲ್ಲ ಕಿಂತು ವರ್ಣವೇ ಆಗಿವೆ ಎಂದು ವ್ಯಾಖ್ಯಾನಕಾರರು ನಾದಾದಿಗಳನ್ನು ವರ್ಣ ಎಂದು ಸಮರ್ಥಿಸಿದ್ದಾರೆ.

ಈ ಓಂಕಾರದ ಅವಯವಗಳಾದ ಎಂಟು ಅಕ್ಷರಗಳು ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂದು ಎಂಟು ರೂಪಗಳನ್ನು ಪ್ರತಿಪಾದಿಸುತ್ತಿವೆ.

**ಕೃಷ್ಣೋ ರಾಮೋ ನೃಸಿಂಹಶ್ಚ ವರಾಹೋ ವಿಷ್ಣುರೇವ ಚ ।**
**ಪರಂಜ್ಯೋತಿಃ ಪರಂ ಬ್ರಹ್ಮ ವಾಸುದೇವ ಇತಿ ಕ್ರಮಾತ್ ।**
**ಅಕಾರಾದೇಸ್ತಥಾ ಶಾಂತಾತಿಶಾಂತಸ್ಯ ದೇವತಾಃ ।। (ಯ.ಪ್ರ.ಕ. 5,6)**

ಎಂಬ ಯತಿಪ್ರಣವಕಲ್ಪೋಕ್ತ ಪ್ರಮಾಣದಿಂದ ಕೃಷ್ಣಾದಿ ಅಷ್ಟಮೂರ್ತಿಗಳೂ ಸಹ ಅಕಾರಾದಿಗಳಿಗೆ ದೇವತೆಗಳಾಗಿದ್ದಾರೆ.

| | ವರ್ಣ | ವಾಚ್ಯಮೂರ್ತಿಗಳು | ರೂಪಗಳು |
|---|---|---|---|
| 1) | ಅಕಾರ | ವಿಶ್ವ | ಕೃಷ್ಣ |
| 2) | ಉಕಾರ | ತೈಜಸ | ರಾಮ |
| 3) | ಮಕಾರ | ಪ್ರಾಜ್ಞ | ನೃಸಿಂಹ |
| 4) | ನಾದ | ತುರೀಯ | ವರಾಹ |
| 5) | ಬಿಂದು | ಆತ್ಮಾ | ವಿಷ್ಣು |
| 6) | ಘೋಷ | ಅಂತರಾತ್ಮಾ | ಪರಂಜ್ಯೋತಿ |
| 7) | ಶಾಂತ | ಪರಮಾತ್ಮ | ಪರಂಬ್ರಹ್ಮ |
| 8) | ಅತಿಶಾಂತ | ಜ್ಞಾನಾತ್ಮ | ವಾಸುದೇವ |

**ಮಾತೃಕಾಮಂತ್ರ, ಹಾಗು ತತ್ಪ್ರತಿಪಾದ್ಯರೂಪಗಳು**

ಈ ವಿಶ್ವಾದಿ ಎಂಟು ರೂಪಗಳಿಂದ ಅಜಾದಿ 50ರೂಪಗಳು ಅಭಿವ್ಯಕ್ತವಾಗಿವೆ. ಓಂಕಾರದ ಅವಯವಗಳಾದ ಅಕಾರಾದಿಗಳಿಂದ ಅಕಾರಾದಿ ಳಕಾರಾಂತ ಐವತ್ತು ವರ್ಣಗಳೂ ಅಭಿವ್ಯಕ್ತವಾಗಿವೆ.

**ನ್ಯಾಸ ಏಕಾಕ್ಷರೇ ಮಂತ್ರೇ ವ್ಯಂಜನಸ್ವರಬಿಂದುಭಿಃ ।**
**ಪಾದಹೃತ್ಕೇಷು ವಿಲಯೇ ವ್ಯತ್ಪತ್ತೌ ವ್ಯತ್ತಮಾತ್ ಭವೇತ್ ॥**

ಎಂದು ಸಂಗ್ರಹದಲ್ಲಿಯೂ ಸಹ ಏಕಾಕ್ಷರಮಂತ್ರದಲ್ಲಿ ವಂಜನ ಸ್ವರ ಬಿಂದುಗಳೆಂದು ಬೇರ್ಪಡಿಸಿ ಪಾದ ಹೃದಯ ಮಸ್ತಕದಲ್ಲಿ ನ್ಯಾಸವನ್ನು ಮಾಡಬೇಕು ಎಂದು ಹೇಳಿದ್ದಾರೆ. ಆದ್ದರಿಂದ ಇಲ್ಲಿ ನಾದಾದಿಗಳ ನ್ಯಾಸವು ಅನಾವಶ್ಯಕವಾಗಿದೆ ಎಂಬ ಕಾರಣದಿಂದಲೇ ಆಚಾರ್ಯರು ಇಲ್ಲಿ ನಾದಾದಿಗಳು ವರ್ಣವಾದರೂ ಸಹ ಅವುಗಳ ನ್ಯಾಸವನ್ನು ಹೇಳಿಲ್ಲ ಎಂದೇ ಸಮಾಧಾನವನ್ನು ಹೇಳಬೇಕು.

ಅಥವಾ, ಮನುಷ್ಯರಿಗೆ ನಾದಾದಿಗಳ ನ್ಯಾಸವನ್ನು ಮಾಡುವ ಅಧಿಕಾರವಿಲ್ಲದಿರುವದರಿಂದ ನಾದಾದಿಗಳ ನ್ಯಾಸವನ್ನು ಆಚಾರ್ಯರು ಇಲ್ಲಿ ಹೇಳಿಲ್ಲ ಎಂದು ಸಮಾಧಾನವನ್ನು ಹೇಳಬಹುದು. ಹೇಗೆಂದರೆ, ಪ್ರಣವಮಂತ್ರಗಳು ತ್ರಿಮಾತ್ರದಿಂದ ಆರಂಭಿಸಿ ಒಂದೊಂದು ಮಾತ್ರಗಳ ಅಭಿವೃದ್ಧಿಯಿಂದ ಚತುರ್ಮಾತ್ರಾ, ಮಂಚಮಾತ್ರಾ, ಇತ್ಯಾದಿಯಾಗಿ ಅನಂತಮಾತ್ರಾವಸನಕವಾಗಿ ಅನಂತವಾಗಿವೆ.

**ತ್ರಿಮಾತ್ರಮಾದಿತಃ ಕೃತ್ವಾ ಯಾವಚ್ಚಾನಂತಮಾತ್ರಕಾಃ ।**
**ಪ್ರಣವಾಸ್ತೇ ವಿಭೇದೇನ ಹ್ಯನಂತಾ ಪರಿಕೀರ್ತಿತಾಃ ।**
**ಏಕಮಾತ್ರೋತ್ತರಾಃ ಸರ್ವೇ...............॥**

ಎಂದು ಭಾಗವತ ತಾತ್ಪರ್ಯದ ಏಕಾದಶಸ್ಕಂಧದಲ್ಲಿ ಆಚಾರ್ಯರು ಹೇಳಿದ್ದಾರೆ. ಮಧ್ವವಿಜಯದಲ್ಲಿಯೂ ಸಹ '**ಅನಂತಮಾತ್ರಾಂತಮುದಾಹರಂತಿ ಯಂ ತ್ರಿಮಾತ್ರಪೂರ್ವಂ ಪ್ರಣವೋಚ್ಚಯಂ ಬುಧಾಃ**' (4-32) ಎಂದು ನಾರಾಯಣಪಂಡಿತಾಚಾರ್ಯರೂ ಸಹ ಪ್ರಣವಂತ್ರಗಳು ತ್ರಿಮಾತ್ರಪೂರ್ವಕವಾಗಿ ಅನಂತಮಾತ್ರಾಂತವಾಗಿವೆ ಎಂದು ಹಳಿದ್ದಾರೆ. ಹೀಗೆ ಅನಂತವಾದ ಪ್ರಣವಮಂತ್ರಗಳಲ್ಲಿ ತ್ರಿಮಾತ್ರಕವಾದ ಪ್ರಣವಮಂತ್ರವನ್ನುಮಾತ್ರ ಜಪಿಸುವ ಅಧಿಕಾರ ಮನುಷ್ಯರಿಗೆ ಇದೆ. ಆದ್ದರಿಂದ ಈ ತಂತ್ರಸಾರಸಂಗ್ರಹದಲ್ಲಿ ಮನುಷ್ಯಾಧಿಕಾರಿಕವಾದ ತ್ರಿಮಾತ್ರಪ್ರಣವಮಂತ್ರದ ನ್ಯಾಸವನ್ನು ಮಾತ್ರ ಹೇಳಿದ್ದಾರೆ. ನ್ಯಾಸವು ಜಪಕ್ಕಾಗಿರುವದರಿಂದ ಜಪ್ಯವಾದ ಮಂತ್ರಗಳ ನ್ಯಾಸವನ್ನು ಹೇಳಬೇಕಾದ್ದರಿಂದ ಆಚಾರ್ಯರು ಮನುಷ್ಯಾಧಿಕಾರಿಕವಾದ ವರ್ಣತ್ರಯಗಳ ನ್ಯಾಸವನ್ನು ಹೇಳಿದ್ದಾರೆ. ಉಳಿದ ಪ್ರಣವಮಂತ್ರಗಳಲ್ಲಿ ಬ್ರಹ್ಮಾದ್ಯಂತ ದೇವತೆಗಳು ಅಧಿಕಾರಿಗಳಾಗಿದ್ದಾರೆ. ಷಡಕ್ಷರ ಸಪ್ತಾಕ್ಷರ ಅಷ್ಟಾಕ್ಷರಭೇದದಿಂದ ಭಿನ್ನವಾದ ಅನೇಕವಿಧವಾದ ಹಂಸಮಂತ್ರಗಳಲ್ಲಿ ಸಪ್ತಾಕ್ಷರ ಹಂಸಮಂತ್ರವು '**ತಾರಯೋಗೋಽಪ್ಯೇವಮೇವ ಬ್ರಹ್ಮಾದಾವೇವ ವರ್ತತೇ**' (4-23) ಎಂದು ಬ್ರಹ್ಮಾಧಿಕಾರಿಕವಾಗಿದೆ ಎಂದು ಹೇಳಿ ಮನುಷ್ಯಾಧಿಕಾರಿಕವಾದ ಷಡಕ್ಷರ ಅಷ್ಟಾಕ್ಷರ ಹಂಸಮಂತ್ರಗಳ ನ್ಯಾಸವನ್ನು ಮಾತ್ರ ಆಚಾರ್ಯರು ತುರೀಯಾಧ್ಯಾಯದಲ್ಲಿ ಹೇಳಿದ್ದಾರೆ. ಅದೇರೀತಿಯಾಗಿ ಇಲ್ಲಿಯೂ ಸಹ ಮನುಷ್ಯಾಧಿಕಾರಿಕವಾದ ಪ್ರಣವಮಂತ್ರದ ನ್ಯಾಸವನ್ನು ಮಾತ್ರ ಆಚಾರ್ಯರು ಹೇಳಿರುವರು. ನಾದಾದಿಮಾತ್ರೋಪೇತವಾದ ಪ್ರಣವಮಂತ್ರಜಪದ ಅಧಿಕಾರವು ಮನುಷ್ಯರಿಗೆ ಇಲ್ಲದಿರುವದರಿಂದ ನಾದಾದಿಗಳು ವರ್ಣವಾದರೂ ಸಹ ಅವುಗಳ ನ್ಯಾಸವನ್ನು ಆಚಾರ್ಯರು ಹೇಳಿಲ್ಲ ಎಂದು ಸಮಾಧಾನವನ್ನು ಹೇಳಲು ಬರುತ್ತದೆ.

ಮನುಷ್ಯಾಧಿಕಾರಿಕವಾದ ನ್ಯಾಸವನ್ನು ಹೇಳುವದಿದ್ದರೆ ಮನುಷ್ಯಾಧಿಕಾರಿಕವಾದ ತ್ರಿಮಾತ್ರವಾದ ಓಂಕಾರವನ್ನು ಮಾತ್ರ ಆಚಾರ್ಯರು ಹೇಳಬೇಕಿತ್ತು. ಅಷ್ಟಾಕ್ಷರೋಪೇತವಾದ ಪ್ರಣವಮಂತ್ರವನ್ನು ಆಚಾರ್ಯರು ಹೇಳಲು ಕಾರಣವೇನು ಎಂದು ಶಂಕಿಸುವಂತಿಲ್ಲ. ಏಕೆಂದರೆ ಇಲ್ಲಿ ಪ್ರಥಮತಃ ಮಂತ್ರಗಳ ಅಭಿವ್ಯಕ್ತಿಕ್ರಮವನ್ನು ಹೇಳುತ್ತಿರುವರು. ಅಭಿವ್ಯಕ್ತಿಪ್ರಕರಣವನ್ನು ಹೇಳುವ ಸಂದರ್ಭದಲ್ಲಿ ಅಷ್ಟವರ್ಣೋಪೇತವಾದ ಪ್ರಣವದ ಅಭಿವ್ಯಕ್ತಿಯನ್ನು ಆಚಾರ್ಯರು ಹೇಳಿದ್ದಾರೆ. ಜಪಪ್ರಕರಣದಲ್ಲಿ ತ್ರಿಮಾತ್ರಕವಾದ ಪ್ರಣವದ ಉಪಯೋಗವೇ ಇದೆ ಎಂದು ತಿಳಿಸಲು 'ಆದಿವರ್ಣತ್ರಯಮ್' ಎಂದು ಮೂರು ವರ್ಣಗಳ ನ್ಯಾಸವನ್ನು ಮಾತ್ರ ಆಚಾರ್ಯರು ಹೇಳಿದ್ದಾರೆ. ಆದ್ದರಿಂದ ನಾದಾದಿಗಳು ವರ್ಣಧರ್ಮವಲ್ಲ ಕಿಂತು ವರ್ಣವೇ ಆಗಿವೆ ಎಂದು ವ್ಯಾಖ್ಯಾನಕಾರರು ನಾದಾದಿಗಳನ್ನು ವರ್ಣ ಎಂದು ಸಮರ್ಥಿಸಿದ್ದಾರೆ.

ಈ ಓಂಕಾರದ ಅವಯವಗಳಾದ ಎಂಟು ಅಕ್ಷರಗಳು ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂದು ಎಂಟು ರೂಪಗಳನ್ನು ಪ್ರತಿಪಾದಿಸುತ್ತಿವೆ.

**ಕೃಷ್ಣೋ ರಾಮೋ ನೃಸಿಂಹಶ್ಚ ವರಾಹೋ ವಿಷ್ಣುರೇವ ಚ ।**
**ಪರಂಜ್ಯೋತಿಃ ಪರಂ ಬ್ರಹ್ಮ ವಾಸುದೇವ ಇತಿ ಕ್ರಮಾತ್ ।**
**ಅಕಾರಾದೇಸ್ತಥಾ ಶಾಂತಾತಿಶಾಂತಸ್ಯ ದೇವತಾಃ ॥ (ಯ.ಪ್ರ.ಕ. 5,6)**

ಎಂಬ ಯತಿಪ್ರಣವಕಲ್ಪೋಕ್ತ ಪ್ರಮಾಣದಿಂದ ಕೃಷ್ಣಾದಿ ಅಷ್ಟಮೂರ್ತಿಗಳೂ ಸಹ ಅಕಾರಾದಿಗಳಿಗೆ ದೇವತೆಗಳಾಗಿದ್ದಾರೆ.

| | ವರ್ಣ | ವಾಚ್ಯಮೂರ್ತಿಗಳು | ರೂಪಗಳು |
|---|---|---|---|
| 1) | ಅಕಾರ | ವಿಶ್ವ | ಕೃಷ್ಣ |
| 2) | ಉಕಾರ | ತೈಜಸ | ರಾಮ |
| 3) | ಮಕಾರ | ಪ್ರಾಜ್ಞ | ನೃಸಿಂಹ |
| 4) | ನಾದ | ತುರೀಯ | ವರಾಹ |
| 5) | ಬಿಂದು | ಆತ್ಮಾ | ವಿಷ್ಣು |
| 6) | ಘೋಷ | ಅಂತರಾತ್ಮಾ | ಪರಂಜ್ಯೋತಿ |
| 7) | ಶಾಂತ | ಪರಮಾತ್ಮ | ಪರಂಬ್ರಹ್ಮ |
| 8) | ಅತಿಶಾಂತ | ಜ್ಞಾನಾತ್ಮ | ವಾಸುದೇವ |

**ಮಾತೃಕಾಮಂತ್ರ ಹಾಗು ತತ್ಪ್ರತಿಪಾದ್ಯರೂಪಗಳು**

ಈ ವಿಶ್ವಾದಿ ಎಂಟು ರೂಪಗಳಿಂದ ಅಜಾದಿ 50ರೂಪಗಳು ಅಭಿವ್ಯಕ್ತವಾಗಿವೆ. ಓಂಕಾರದ ಅವಯವಗಳಾದ ಅಕಾರಾದಿಗಳಿಂದ ಅಕಾರಾದಿ ಳಕಾರಾಂತ ಐವತ್ತು ವರ್ಣಗಳೂ ಅಭಿವ್ಯಕ್ತವಾಗಿವೆ.

ಇಲ್ಲಿ ಆಚಾರ್ಯರು 'ದ್ವಿರಷ್ಟಕಪಂಚಕಚತುಷ್ಪಂಚೇತ್ಯೇವಾಷ್ಟವರ್ಗಗಾಃ' ಎಂದು ವರ್ಣಗಳ ಅಭಿವ್ಯಕ್ತಿಯನ್ನು ಎಂಟು ಗುಂಪಾಗಿ ವಿಂಗಡಿಸಿ ಅಭಿವ್ಯಕ್ತಿಯನ್ನು ಸುಂದರವಾಗಿ ಪ್ರತಿಪಾದಿಸಿದ್ದಾರೆ.

1) ಹದಿನಾರು ಸ್ವರಗಳು ಅಕಾರದಿಂದ ಅಭಿವ್ಯಕ್ತ

2) ಕವರ್ಗ ಉಕಾರದಿಂದ ಅಭಿವ್ಯಕ್ತ

3) ಚವರ್ಗ ಮಕಾರದಿಂದ ಅಭಿವ್ಯಕ್ತ

4) ಟವರ್ಗ ನಾದದಿಂದ ಅಭಿವ್ಯಕ್ತ

5) ತವರ್ಗ ಬಿಂದುವಿನಿಂದ ಅಭಿವ್ಯಕ್ತ

6) ಪವರ್ಗ ಘೋಷದಿಂದ ಅಭಿವ್ಯಕ್ತ

7) ಯ,ರ,ಲ,ವಗಳು ಶಾಂತದಿಂದ ಅಭಿವ್ಯಕ್ತ

8) ಶ,ಷ,ಹ,ಳ ಅತಿಶಾಂತದಿಂದ ಅಭಿವ್ಯಕ್ತ

ಅಭಿವ್ಯಕ್ತವಾದ ಈ ವರ್ಣಗಳು ಅಭಿವ್ಯಂಜಕವಾದ ಅಕಾರಾದಿಗಳನ್ನು ವ್ಯಾಖ್ಯಾನಿಸುತ್ತವೆ. ಹದಿನಾರು ಸ್ವರಗಳು ತಮಗೆ ವ್ಯಂಜಕವಾದ ಅಕಾರವನ್ನು ವ್ಯಾಖ್ಯಾನಿಸುತ್ತದೆ. ಅದೇರೀತಿಯಾಗಿ ಕವರ್ಗವು ವ್ಯಂಜಕವಾದ ಉಕಾರವನ್ನು ವ್ಯಾಖ್ಯಾನಿಸುತ್ತದೆ. ಹೀಗೆ ತಮಗೆ ವ್ಯಂಜಕವಾದ ಓಂಕಾರಗತವಾದ ವರ್ಣಗಳನ್ನು ವ್ಯಾಖ್ಯಾನಿಸುತ್ತವೆ. ಆದ್ದರಿಂದ ಈ ಎಲ್ಲ ವಾಙ್ಮಯಪ್ರಪಂಚವು ಓಂಕಾರದ ವಿಸ್ತಾರವೇ ಆಗಿದೆ. ಆದ್ದರಿಂದ ಎಲ್ಲ ವಾಙ್ಮಯವು ಭಗವದ್ವಾಚಕವಾಗಿದೆ.

**ನಾರಾಯಣಾಷ್ಟಾಕ್ಷರಮಂತ್ರಾಭಿವ್ಯಕ್ತಿ**

**ನಾರಾಯಣಾಷ್ಟಾಕ್ಷರಶ್ಚ ತಾರಾಷ್ಟಾಕ್ಷರಭೇದವಾನ್ ।** (ತಂ.ಸಾ.1-11)

ಎಂದು ಆಚಾರ್ಯರು ನಾರಾಯಣಾಷ್ಟಾಕ್ಷರಮಂತ್ರವು ಓಂಕಾರದ ಅಷ್ಟಾಕ್ಷರಗಳಿಂದ ಅಭಿವ್ಯಕ್ತವಾಗಿ ಪ್ರಣವಾಷ್ಟಾಕ್ಷರವನ್ನು ವ್ಯಾಖ್ಯಾನಿಸುತ್ತದೆ ಎಂದು ಹೇಳಿದ್ದಾರೆ.

1) ಅಕಾರದಿಂದ ಓಂಕಾರವು ಅಭಿವ್ಯಕ್ತ

2) ಉಕಾರದಿಂದ ನಕಾರವು ಅಭಿವ್ಯಕ್ತ

3) ಮಕಾರದಿಂದ ಮೋಕಾರಾಭಿವ್ಯಕ್ತ

4) ನಾದದಿಂದ ನಾಕಾರವು ಅಭಿವ್ಯಕ್ತ

5) ಬಿಂದುವಿನಿಂದ ರಾಕಾರವು ಅಭಿವ್ಯಕ್ತ

6) ಘೋಷದಿಂದ ಯಕಾರವು ಅಭಿವ್ಯಕ್ತ

7) ಶಾಂತದಿಂದ ಣಾಕಾರವು ಅಭಿವ್ಯಕ್ತ

8) ಅತಿಶಾಂತದಿಂದ ಯಕಾರವು ಅಭಿವ್ಯಕ್ತವಾಗಿದೆ.

**ವ್ಯಾಹೃತಿಮಂತ್ರಾಭಿವ್ಯಕ್ತಿ**

ಓಂಕಾರದ ಮೊದಲಿನ ಅ,ಉ,ಮ,ನಾದ ಎಂಬ ನಾಲ್ಕು ವರ್ಣಗಳಿಂದ 'ಭೂಃ ಭುವಃ ಸ್ವಃ ಭೂರ್ಭುವಸ್ವಃ' ಎಂಬ ನಾಲ್ಕು ವ್ಯಾಹೃತಿಯು ಕ್ರಮವಾಗಿ ಅಭಿವ್ಯಕ್ತವಾಗಿ ಓಂಕಾರದ ನಾಲ್ಕು ವರ್ಣಗಳನ್ನು ವ್ಯಾಖ್ಯಾನಿಸುತ್ತದೆ. ಈ ನಾಲ್ಕು ವ್ಯಾಹೃತಿಗಳಿಗೆ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬ ನಾಲ್ಕು ರೂಪಗಳು ಪ್ರತಿಪಾದ್ಯವಾಗಿವೆ. ಅಥವಾ ವ್ಯತ್ಯಸ್ತವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ರೂಪಗಳು ಪ್ರತಿಪಾದ್ಯವಾಗಿವೆ.

**'ಸಮಾಸವ್ಯಾಸಯೋಗೇನ ವ್ಯಾಹೃತೀನಾಂ ಚತುಷ್ಟಯಮ್ । ಸತ್ಯಂ ಚಾಂಗಾನಿ...'** ಎಂದು ಇಲ್ಲಿ ಹೇಳಿದ ರೀತಿಯಿಂದ ಸತ್ಯಪದಾಂತವ್ಯಾಹೃತಿಗಳಿಂದ ಪಂಚಾಂಗನ್ಯಾಸವನ್ನು ಮಾಡುವಾಗ ಅನಿರುದ್ಧಾದಿಕ್ರಮದಿಂದ ದೇವತಗಳು. **'ತಾರೇಣ ವ್ಯಾಹೃತೀಭಿಶ್ಚ ಜ್ಞೇಯಾನ್ಯಂಗಾನಿ ಪಂಚ ಚ'** (1-34) ಎಂಬ ಸ್ಥಳದಲ್ಲಿ ಹೇಳಿದಂತೆ ಓಂಕಾರಸಹಿತ ವ್ಯಾಹೃತಿಗಳಿಂದ ಪಂಚಾಂಗನ್ಯಾಸವನ್ನು ಮಾಡುವಾಗ ಭೂರಾದಿವ್ಯಾಹೃತಿಗಳಿಗೆ ವಾಸುದೇವಾದಿಕ್ರಮದಿಂದ ದೇತೆಗಳು ಎಂದು ತಿಳಿಯಬೇಕು.

ಅಥವಾ, ಅನಿರುದ್ಧಾದಿಕ್ರಮವು ಸನ್ಯಾಸಿಗಳ ವಿಷಯವಾಗಿದೆ. ವಾಸುದೇವಾದಿಕ್ರಮವು ಗೃಹಸ್ಥವಿಷಯವಾಗಿದೆ ಎಂದು ವ್ಯವಸ್ಥಿತವಾಗಿ ಕ್ರಮವ್ಯತ್ಕ್ರಮದಿಂದ ದೇವತೆಗಳನ್ನು ತಿಳಿಯಬೇಕು.

**ವಾಸುದೇವಮಂತ್ರಾಭಿವ್ಯಕ್ತಿ**

'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರಾತ್ಮಕವಾದ ವಾಸುದೇವ ಮಂತ್ರವು ನಾರಾಯಣಾಷ್ಟಾಕ್ಷರದಿಂದ ಮತ್ತು ನಾಲ್ಕು ವ್ಯಾಹೃತಿಗಳಿಂದ ಮಿಲಿತವಾಗಿ ಒಟ್ಟು 12 ಅಕ್ಷರಗಳಿಂದ ಅಭಿವ್ಯಕ್ತವಾಗಿದೆ. ಓಂಕಾರದಿಂದ ಸಾಕ್ಷಾತ್ತಾಗಿ ಅಭಿವ್ಯಕ್ತವಾದದ್ದು ನಾರಾಯಣಾಷ್ಟಾಕ್ಷರ ಮತ್ತು ವ್ಯಾಹೃತಿಗಳು. ಅದರಿಂದ ಅಭಿವ್ಯಕ್ತವಾದದ್ದು ವಾಸುದೇವ ದ್ವಾದಶಾಕ್ಷರಮಂತ್ರ. ವಾಸುದೇವದ್ವಾದಶಾಕ್ಷರಮಂತ್ರವು ಪರಂಪರಯಾ ಪ್ರಣವದಿಂದ ಅಭಿವ್ಯಕ್ತ ವಾಗಿದೆ. ಆದ್ದರಿಂದ ಈ ವಾಸುದೇವಮಂತ್ರವೂ ಸಹ ಪರಂಪರಯಾ ಪ್ರಣವವ್ಯಾಖ್ಯಾನವಾಗಿದೆ.

ಕೇಶವಾದಿ ದಾಮೋದರಾಂತ ರೂಪಗಳು ಈ ದ್ವಾದಶವರ್ಣದಿಂದ ಪ್ರತಿಪಾದ್ಯವಾಗಿವೆ.

| | ಮಂತ್ರ | ಅಭಿವ್ಯಂಜಕ | ಪ್ರತಿಪಾದ್ಯರೂಪ |
|---|---|---|---|
| 01) | ಓಂಕಾರ | ಓಂಕಾರ | ಕೇಶವ |
| 02) | ನಕಾರ | ನಕಾರ | ನಾರಾಯಣ |
| 03) | ಮೋಕಾರ | ಮೋಕಾರ | ಮಾಧವ |
| 04) | ಭಕಾರ | ನಾಕಾರ | ಗೋವಿಂದ |
| 05) | ಗಕಾರ | ರಾಕಾರ | ವಿಷ್ಣು |

| | | | |
|---|---|---|---|
| 06) | ವಕಾರ | ಯಕಾರ | ಮಧುಸೂದನ |
| 07) | ತೇಕಾರ | ಣಾಕಾರ | ತ್ರಿವಿಕ್ರಮ |
| 08) | ವಾಕಾರ | ಯಕಾರ | ವಾಮನ |
| 09) | ಸುಕಾರ | ಭೂಃ ಎಂಬ ವ್ಯಾಹೃತಿ | ಶ್ರೀಧರ |
| 10) | ದೇಕಾರ | ಭುವಃ ಎಂಬ ವ್ಯಾಹೃತಿ | ಹೃಷೀಕೇಶ |
| 11) | ವಾಕಾರ | ಸ್ವಃ ಎಂಬ ವ್ಯಾಹೃತಿ | ಪದ್ಮನಾಭ |
| 12) | ಯಕಾರ | ಭೂರ್ಭುವಸ್ವಃ ಎಂಬ ವ್ಯಾಹೃತಿ | ದಾಮೋದರ |

**ಗಾಯತ್ರೀಮಂತ್ರಾಭಿವ್ಯಕ್ತಿ**

**ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿತ್ರಿಗುಣಾತ್ಪುನಃ ।**
**ವೇದಮಾತಾ ತು ಗಾಯತ್ರೀ ದ್ವಿಗುಣಾ ದ್ವಾದಶಾಕ್ಷರಾತ್ ॥ (ತಂ.ಸಾ. 1-14)**

ಮೂರು ಬಾರಿ ಉಚ್ಚರಿಸಿದ ನಾರಾಯಣಾಷ್ಟಾಕ್ಷರಮಂತ್ರದಿಂದ (8X3=24) ಎರಡು ಬಾರಿ ಆವೃತ್ತಿಸಿದ ವಾಸುದೇವದ್ವಾದಶಾಕ್ಷರಮಂತ್ರದಿಂದ ವೇದಮಾತೆಯಾದ ಗಾಯತ್ರೀಮಂತ್ರವು ಅಭಿವ್ಯಕ್ತವಾಗಿದೆ.

ಈ ಗಾಯತ್ರೀಮಂತ್ರದ ಅಭಿವ್ಯಕ್ತಿಕ್ರಮವನ್ನು ಹೇಳುವ ಈ ಶ್ಲೋಕಕ್ಕೆ ಎರಡು ಮೂರು ರೀತಿಯಿಂದ ವ್ಯಾಖ್ಯಾನಿಸಿದ್ದಾರೆ. ನಾರಾಯಣಾಷ್ಟಾಕ್ಷರದಲ್ಲಿರುವ ಎಂಟು ವರ್ಣಗಳಿಂದ, ನಾಲ್ಕು ವ್ಯಾಹೃತಿಗಳ ನಾಲ್ಕು ಬಾರಿ ಉಚ್ಚಾರಣೆಯಿಂದ ಹದಿನಾರು ವರ್ಣಗಳು ಆಗುತ್ತವೆ. ಹೀಗೆ ನಾರಾಯಣಾಷ್ಟಾಕ್ಷರ, ನಾಲ್ಕು ಬಾರಿ ಉಚ್ಚರಿಸಿದ ವ್ಯಾಹೃತಿಯಿಂದ ಒಟ್ಟು 24 ಅಕ್ಷರಗಳಿಂದ 24 ಅಕ್ಷರದಿಂದ ಕೂಡಿದ ಗಾಯತ್ರೀಮಂತ್ರವು ಅಭಿವ್ಯಕ್ತವಾಗಿದೆ. ಈ ಪಕ್ಷದಲ್ಲಿ ನಾರಾಯಣಾಷ್ಟಾಕ್ಷರ ಮಂತ್ರ ಮತ್ತು ವ್ಯಾಹೃತಿಮಂತ್ರದಿಂದ ಗಾಯತ್ರೀಮಂತ್ರದ ಅಭಿವ್ಯಕ್ತಿಯನ್ನು ತಿಳಿಯಬೇಕು.

ಮೂರು ಬಾರಿ ಉಚ್ಚರಿಸಿದ ನಾರಾಯಣಾಷ್ಟಾಕ್ಷರದಿಂದ ಅಂದರೆ ಒಟ್ಟು 24 ವರ್ಣಗಳಿಂದ ಗಾಯತ್ರೀಮಂತ್ರವು ಅಭಿವ್ಯಕ್ತವಾಗಿದೆ. ಈ ಪಕ್ಷದಲ್ಲಿ ವ್ಯಾಹೃತಿ ಎಂಬ ಶಬ್ದಕ್ಕೆ ವ್ಯಾಹರಣ ಎಂದು ಅರ್ಥ. ಈ ಪಕ್ಷದಲ್ಲಿ ಕೇವಲ ನಾರಾಯಣಾಷ್ಟಾಕ್ಷರ ಮಂತ್ರದಿಂದ ಗಾಯತ್ರೀ ಮಂತ್ರದ ಅಭಿವ್ಯಕ್ತಿಯನ್ನು ಹೇಳಿದಂತಾಗುತ್ತದೆ.

ಅಥವಾ, 'ವ್ಯಾಹೃತಿತ್ರಿಗುಣಾತ್' ಎಂಬ ಪದವನ್ನು ಆವೃತ್ತಿಮಾಡಿ ಒಂದು 'ನಾರಾಯಣಾಷ್ಟಾಕ್ಷರಾತ್' ಎಂಬ ಪದಕ್ಕೆ ವಿಶೇಷಣ. ಇನ್ನೊಂದು ಸ್ವಯಂ ತಾನೇ ವಿಶೇಷ್ಯ . ಮೂರು ಬಾರಿ ಉಚ್ಚರಿಸಿದ ನಾರಾಯಣಮಂತ್ರದಿಂದ ಗಾಯತ್ರೀಮಂತ್ರದ ಅಭಿವ್ಯಕ್ತಿ . ಮತ್ತು ಮೂರು ಬಾರಿ ಉಚ್ಚರಿಸಿದ ಎಂಟು ವರ್ಣಗಳಿಂದ ಕೂಡಿದ ವ್ಯಾಹೃತೀಮಂತ್ರದಿಂದ ಅಂದರೆ ಒಟ್ಟು 24 ವರ್ಣಗಳಿಂದ 24 ವರ್ಣಾತ್ಮಕ ವಾದ ಗಾಯತ್ರೀಮಂತ್ರದ ಅಭಿವ್ಯಕ್ತಿ . ಈ ಪಕ್ಷದಲ್ಲಿ ಕೇವಲ ನಾರಾಣಮಂತ್ರದಿಂದ ಗಾಯತ್ರೀಮಂತ್ರವು ಅಭಿವ್ಯಕ್ತವಾಗುವಂತೆ ಕೇವಲ ವ್ಯಾಹೃತಿಮಂತ್ರದಿಂದ ಗಾಯತ್ರೀಮಂತ್ರವು

ಅಭಿವ್ಯಕ್ತ. ಎಲ್ಲ ಪಕ್ಷದಲ್ಲಿಯೂ ಸಹ ಈ ಗಾಯತ್ರೀಮಂತ್ರವು ಪರಂಪರಯಾ ಓಂಕಾರವನ್ನು ವ್ಯಾಖ್ಯಾನಿಸುತ್ತದೆ ಎಂದು ತಿಳಿಯಬೇಕು. ಈ ಗಾಯತ್ರೀಮಂತ್ರಕ್ಕೆ ಒಂದೋಂದು ಅಕ್ಷರಗಳಿಂದ ಕ್ರಮವಾಗಿ ಕೇಶವಾದಿ ಕೃಷ್ಣಾಂತ 24ರೂಪಗಳು ಪ್ರತಿಪಾದ್ಯವಾಗಿವೆ.

**ಪುರುಷಸೂಕ್ತಾಭಿವ್ಯಕ್ತಿ**

ತ್ರಿಪಾದಾತ್ಮಕವಾದ ಗಾಯತ್ರೀಮಂತ್ರದಿಂದ ವರ್ಗತ್ರಯಾತ್ಮಕವಾದ ಪುರುಷಸೂಕ್ತವು ಅಭಿವ್ಯಕ್ತವಾಗಿದೆ. ಈ ಪುರುಷಸೂಕ್ತವು ಪರಂಪರಯಾ ಓಂಕಾರವನ್ನು ವ್ಯಾಖ್ಯಾನಿಸುತ್ತ ಭಗವತ್ಪ್ರತಿಪಾದಕವಾಗಿದೆ.

**ವೈದಿಕಾಃ ಸರ್ವಶಬ್ದಾಶ್ಚ ತಸ್ಮಾತ್ ಸರ್ವಾಭಿಧೋ ಹ್ಯಹಮ್ ।**
**ಪಂಚಾಶದ್ವರ್ಣಭಿನ್ನಾಶ್ಚ ಸರ್ವಶಬ್ದಾ ಅತೋಽಪಿ ಚ ॥**

ಎಂದು ಆಚಾರ್ಯರು ಈ ಎಲ್ಲ ಸಮಸ್ತಮಂತ್ರಗಳಿಂದ ಭಗವಂತನೇ ಪ್ರತಿಪಾದ್ಯ ಎಂದು ತಿಳಿಸಿದ್ದಾರೆ.

**ತಾರೋಽಷ್ಟವರ್ಣೋ ದ್ವಿಷಡಕ್ಷರೋಽನ್ಯಃ ಷಡಕ್ಷರೋ ವ್ಯಾಹೃತಯಃ ಕ್ರಮೇಣ ।**
**ಪಂಚಾದಶಾರ್ಣಾಃ ಸವಿತುಶ್ಚ ಪತ್ನೀ ಪುಂಸೂಕ್ತಮಷ್ಟಾವಿತಿ ಮೂಲಮಂತ್ರಾಃ ॥**

ಪ್ರಣವ, ನಾರಾಯಣಾಷ್ಟಾಕ್ಷರ, ವಾಸುದೇವದ್ವಾದಶಾಕ್ಷರ, ಷಡಕ್ಷರವಿಷ್ಣುಮಂತ್ರ, ವ್ಯಾಹೃತಿ, ಮಾತೃಕಾಮಂತ್ರ, ಗಾಯತ್ರೀ, ಪುಂಸೂಕ್ತ ಇವು ಅಷ್ಟಮಹಾಮಂತ್ರಗಳು ಎಂದು ವಾಸುದೇವ ಸ್ಮೃತಿಯು ಸಾರಿದೆ.

**ಸಂಧ್ಯಾಸು ಮಂತ್ರಾ ಇಮ ಏವ ಜಪ್ಯಾಸ್ತಾರೋ ಯತೀನಾಂ ಪ್ರಥಮೋ ಹಿ ಮಂತ್ರಃ ।**
**ಸಾವಿತ್ರ ಉಕ್ತಶ್ಚ ತಥಾ ಪರೇಷಾಂ ದ್ವಿಜನ್ಮನಾಂ ಶಶ್ವದನಿಂದಿತಾನಾಮ್ ॥**

ಎಂಬ ಮಾಧವತೀರ್ಥಸ್ಮೃತ್ಯನುಗುಣವಾಗಿ ಯತಿಗಳು ಮೊದಲಿಗೆ ಪ್ರಣವಮಂತ್ರವನ್ನು ಉಳಿದವರು ಮೊದಲಿಗೆ ಗಾಯತ್ರೀ ಮಂತ್ರವನ್ನು ಜಪಿಸಬೇಕು. ಅಷ್ಟೇ ಅಲ್ಲದಲೇ ಮೂರು ಸಂಧ್ಯಾಕಾಲಗಳಲ್ಲಿಯೂ ಈ ಅಷ್ಟಮಹಾಮಂತ್ರಗಳನ್ನು ಜಪಿಸಬಹುದು ಎಂದು ತಿಳಿಯುತ್ತದೆ.

**ಏತತ್ ಜ್ಞಾನಾತ್ಸಮಸ್ತಂ ಚ ಜ್ಞಾತಂ ಸ್ಯಾತ್ ಶಬ್ದಗೋಚರಮ್ ।**
**ಏತಜ್ಜಪಾತ್ಸಮಸ್ತಾನಾಂ ಮಂತ್ರಾಣಾಂ ಜಾಪಕೋ ಭವೇತ್ ॥ (ತಂ.ಸಾ. 1-47)**

ಈ ಅಷ್ಟಮಹಾಮಂತ್ರಗಳು ಅತ್ಯವಶ್ಯವಾಗಿ ಜಪಿಸಲೇ ಬೇಕು. ಇದರಲ್ಲಿಯೇ ಎಲ್ಲವೂ ಅಡಗಿದೆ ಎಂದು ಆಚಾರ್ಯರು ಸಮರ್ಥಿಸಿದ್ದಾರೆ.

**'ಪ್ರಣವೋ ಯತೀನಾಮೇವ ಗೃಹಿಭಿರ್ಜ್ಞಾಯತೇ ನ ಸಃ'** ಎಂಬ ವಚನಾನುಸಾರವಾಗಿ ಅಷ್ಟಮಹಾಮಂತ್ರಗಳಲ್ಲಿ ಸೇರಿರುವ ಪ್ರಣವಮಂತ್ರಜಪಕ್ಕೆ ಯತಿಗಳೇ ಅಧಿಕಾರಿಗಳು ಗೃಹಸ್ಥರು ಅಲ್ಲ ಎಂದು ಕೆಲವರು ಹೇಳುತ್ತಾರೆ.

ಕೆಲವರು ಗೃಹಸ್ಥಾದಿಗಳೂ ಸಹ ಪ್ರಣವಮಂತ್ರಜಪಕ್ಕೆ ಅಧಿಕಾರಿಗಳು ಎಂದು ಹೇಳುತ್ತಾರೆ. ಆಚಾರ್ಯರು ತೃತೀಯಾಧ್ಯಾಯದಲ್ಲಿ ಪ್ರತಿಮಾಪ್ರತಿಷ್ಠೆಯನ್ನು ಹೇಳುವಾಗ ಹೋಮಾದಿಕರ್ತೃವಾದವನು '**ಪ್ರಣವಂ ಚ ಜಪೇದ್ವಿಷ್ಣುಂ**' ಎಂದು ಪ್ರಣವಮಂತ್ರಜಪವನ್ನು ಗೃಹಸ್ಥಾದಿಗಳಿಗೂ ಸಹ ಹೇಳಿದ್ದಾರೆ.

**.........ನಾರಾಯಣಾಷ್ಟಾಕ್ಷರಂ ಚ ವೈಷ್ಣವಂ ಚ ಷಡಕ್ಷರಮ್ ।**
**ದ್ವಾದಶಾರ್ಣೋ ವ್ಯಾಹೃತಿಶ್ಚ ಷಡೇತೇ ಮನವೋಽಖಿಲೈಃ ।**
**ಮುಮುಕ್ಷುಭಿಃ ಸದಾ ಜಪ್ಯಾ ಯತಿಭಿಸ್ತತ ಏವ ಹಿ ॥ (2-120)**

ಎಂದು ವಿಷ್ಣುತೀರ್ಥರು ನಾರಾಯಣಾಷ್ಟಾಕ್ಷರ, ವಿಷ್ಣುಮಂತ್ರ , ವಾಸುದೇವದ್ವಾದಶಾಕ್ಷರಮಂತ್ರ , ವ್ಯಾಹೃತಿಮಂತ್ರ , ಪ್ರಣವಮಂತ್ರ ಎಂಬ ಆರು ಮಂತ್ರಗಳನ್ನು ಮುಮುಕ್ಷುಗಳು ಜಪಿಸಬೇಕು. ಮುಮುಕ್ಷುಗಳಾದ್ದರಿಂದಲೇ ಯತಿಗಳೂ ಸಹ ಜಪಿಸಬೇಕು ಎಂದು ಯತಿಗಳಿಗೆ ಉಪದೇಶಪ್ರಕರಣದಲ್ಲಿ ಹೇಳಿದ್ದಾರೆ. ಪೂರ್ವದಲ್ಲಿ ಉದಾಹೃತವಾದ 'ಸಂಧ್ಯಾಸು....' ಎಂಬ ಮಾಧವತೀರ್ಥಸ್ಮೃತಿಯಲ್ಲಿ ಗೃಹಸ್ಥರಿಗೂ ಸಹ ಪ್ರಣವಮಂತ್ರದಲ್ಲಿ ಅಧಿಕಾರವಿರುವದರಿಂದಲೇ ಯತಿಗಳು ಪ್ರಣವಮಂತ್ರವನ್ನು ಪ್ರಥಮತಃ, ಗೃಹಸ್ಥರು ವಿಶ್ವಾಮಿತ್ರಗಾಯತ್ರೀಮಂತ್ರವನ್ನು ಮೊದಲಿಗೆ ಜಪಿಸಬೇಕು ಎಂಬ ವಿಶೇಷವನ್ನು ಹೇಳಿದ್ದಾರೆ. ಗೃಹಸ್ಥರಿಗೆ ಪ್ರಣವಮಂತ್ರಜಪಾಧಿಕಾರವಿಲ್ಲದಿದ್ದರೆ ಈ ಪ್ರಥಮಜಪ್ಯತ್ವವಿಶೇಷವು ಉಪಪನ್ನವಾಗುವುದಿಲ್ಲ. 'ಪ್ರಣವೋ ಯತೀನಾಮೇವ ಗೃಹಿಭಿರ್ಜ್ಞಾಯತೇ ನ ಸಃ'ಎಂಬ ವರಾಹಪುರಾಣವಚನವಿರೋಧವೂ ಬರುವದಿಲ್ಲ. ಏಕೆಂದರೆ ಪುರಶ್ಚರಣ ಮತ್ತು ಬಹುಜಪವನ್ನು ಮಾಡುವ ಅಧಿಕಾರವು ಗೃಹಸ್ಥರಿಗೆ ಇಲ್ಲ ಎಂದು ವಾರಾಹವಚನಕ್ಕೆ ಅರ್ಥ. ಹೊರತು ಪ್ರಣವಮಂತ್ರಜಪಕ್ಕೆ ಅಧಿಕಾರವಿಲ್ಲ ಎಂದು ಅರ್ಥವಲ್ಲ. ಆದ್ದರಿಂದ ವರಾಹವಚನವು ಸಾವಕಾಶವಾಗಿದೆ.

**ಗೃಹಸ್ಥಾದ್ಯಾಸ್ತಥಾ ಶುದ್ಧಾ ಪೌರಶ್ಚರಣಕಂ ವಿನಾ ।**
**ನಿತ್ಯಮೇವ ಜಪಂ ಕುರ್ಯುಸ್ತೇಷಾಂ ಮಂತ್ರವಿಧಿಂ ಶೃಣು ॥**

ಎಂದು ಸದಾಚಾರಿಗಳಾದ ಭಾರ್ಯಾಂತರಸಂಬಂಧವಿಲ್ಲದ ಬ್ರಹ್ಮಚರ್ಯದಿಂದಿರುವ ಗೃಹಸ್ಥರು ಪೌರಶ್ಚರಣಾದಿಗಳನ್ನು ಮಾಡದೆ ಪ್ರಣವಮಂತ್ರವನ್ನು ಜಪಿಸಬೇಕು ಎಂದು ಶೌನಕರು ಹೇಳಿರುವರು. ಅದೇರೀತಿಯಾಗಿ '**ತಾರೋ ಯತೀನಾಂ ಪ್ರಥಮೋ ಹಿ ಮಂತ್ರಃ ಸಾವಿತ್ರ ಉಕ್ತಶ್ಚ ತಥಾ ಪರೇಷಾಂ**' ಎಂಬ ವಚನಾನುಸಾರವಾಗಿ ಯತಿಗಳಿಗೂ ಸಹ ವಿಶ್ವಾಮಿತ್ರಗಾಯತ್ರೀಮಂತ್ರಜಪದಲ್ಲಿ ಅಧಿಕಾರವಿದೆ ಎಂದು ತಿಳಿಯುತ್ತದೆ.

ಈ ಗಾಯತ್ರೀಮಂತ್ರವು 1) ಏಕೋಂಕಾರ 2) ಸಂಪುಟೋಂಕಾರ 3) ಷಡೋಂಕಾರ ಗಾಯತ್ರೀ ಎಂದು ಮೂರು ವಿಧವಾಗಿದೆ ಎಂದು ಆಗ್ನೇಯಪುರಾಣದಲ್ಲಿ ಹೇಳಿದೆ.

**ಏಕೋಂಕಾರಾ ಸಂಪುಟಾ ಚ ಷಡೋಂಕಾರೇತಿ ಸಾ ತ್ರಿಧಾ ।**
**ಆದಾವೋಂಕಾರಸಂಯುಕ್ತಾ ಗಾಯತ್ರ್ಯೇಕಾ ಉದಾಹೃತಾ ॥**

ಆದ್ಯಂತೋಂಕಾರಸಂಯುಕ್ತಾ ಗಾಯತ್ರೀ ಸಂಪುಟಾ ಸ್ಮೃತಾ ।
ಆದ್ಯೋಂಕಾರಾ ಗೃಹಸ್ಥಸ್ಯ ವರ್ಣಿನಶ್ಚ ನ ಚೇತರೇ ।
ವಾನಪ್ರಸ್ಥಯತೀನಾಂ ತು ಷಡೋಂಕಾರಾ ಪ್ರಶಸ್ಯತೇ ।। ಎಂದು.

**ಏಕೋಂಕಾರಪ್ರಣವಗಾಯತ್ರೀಲಕ್ಷಣ**

ಪೂರ್ವೋಂಕಾರಾ ವ್ಯಾಹೃತಿಯುಗಂತೇ ಚಾಪ್ರಣವಾ ಹಿ ಯಾ ।
ಸೈಕಪ್ರಣವಗಾಯತ್ರೀ ಕೀರ್ತಿತಾ ತು ಮನೀಷಿಭಿಃ ।।

ವ್ಯಾಹೃತಿಯ ಪೂರ್ವದಲ್ಲಿ ಓಂಕಾರದಿಂದ ಕೂಡಿ ಅಂತ್ಯದಲ್ಲಿ ಓಂಕಾರರಹಿತವಾದ ಗಾಯತ್ರೀಯನ್ನು ಏಕೋಂಕಾರಯುಕ್ತಗಾಯತ್ರೀ ಎಂದು ಕರೆಯುತ್ತಾರೆ. 'ಓಂ ಭೂರ್ಭುವಸ್ವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್' ಎಂಬುದು ಏಕೋಂಕಾರಗಾಯತ್ರೀ.

**ಸಂಪುಟೋಂಕಾರಗಾಯತ್ರೀ**

ಓಂಕಾರಂ ಪೂರ್ವಮುಚ್ಚಾರ್ಯ ಭೂರ್ಭುವಃಸ್ವಸ್ತಥೈವ ಚ ।
ಗಾಯತ್ರೀಂ ಪ್ರಣವಂ ಚಾಂತೇ ಗಾಯತ್ರೀ ಸಂಪುಟಾ ಸ್ಮೃತಾ ।। (ಯಾಜ್ಞವಲ್ಕಸ್ಮೃತಿ)

'ಓಂ ಭೂರ್ಭುವಃಸ್ವಃ ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ಓಂ' ಎಂಬುದು ಸಂಪುಟೋಂಕಾರಗಾಯತ್ರೀ ಮಂತ್ರ.

**ಷಡೋಂಕಾರಗಾಯತ್ರೀಮಂತ್ರ**

ತಿಸ್ರೋ ವ್ಯಾಹೃತಯಃ ಪೂರ್ವಂ ಪೃಥಗೋಂಕಾರಸಂಯುತಾಃ ।
ಪೂರ್ವಂ ಪುನರ್ವ್ಯಾಹೃತೀನಾಂ ಮಂತ್ರಸ್ಯಾದ್ಯಂತಯೋಸ್ತಥಾ ।
ಏತಯಾ ಜಪ್ತಯಾ ನಿತ್ಯಂ ವಾಙ್ಮಯಂ ಜಪಿತಂ ಭವೇತ್ ।। (ಮನುಸ್ಮೃತಿ)

'ಓಂ ಓಂ ಭೂಃ ಓಂ ಭುವಃ ಓಂ ಸ್ವಃ ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋನಃ ಪ್ರಚೋದಯಾತ್ ಓಂ' ಎಂದು ಷಡೋಂಕಾರಗಾಯತ್ರೀಮಂತ್ರ

ಆದ್ಯೋಂಕಾರಯುಕ್ತಗಾಯತ್ರೀಯನ್ನು ಗೃಹಸ್ಥರು ಜಪಿಸಬೇಕು. ವಾನಪ್ರಸ್ಥ ಮತ್ತು ಯತಿಗಳಿಗೆ ಷಡೋಂಕಾರಗಾಯತ್ರೀಮಂತ್ರವು ಜಪಿಸಲು ಪ್ರಶಸ್ತವಾಗಿದೆ. ಈ ಓಂಕಾರದ ವಿಸ್ತಾರವೆ ಸಮಸ್ತವಾಙ್ಮಯ ಪ್ರಪಂಚವಾಗಿದೆ. ಈ ಓಂಕಾರವು ಭಗವತ್ಪ್ರತಿಪಾದಕವಾದ್ದರಿಂದ ಅದರ ವ್ಯಾಖ್ಯಾನ ವಾದ ಸಮಸ್ತವಾಙ್ಮಯವು ಭಗವತ್ಪ್ರತಿಪಾದಕವಾಗಿದೆ. ಆದ್ದರಿಂದ ಭಗವಂತನು ಸರ್ವಶಬ್ದ ವಾಚ್ಯನಾಗಿದ್ದಾನೆ.

ಇದೇರೀತಿಯಾಗಿ ಚಕ್ರಾಬ್ಜಾದಿ ಮಂಡಲದಲ್ಲಿ ಶ್ರೀಹರಿಯ ಪೂಜೆ, ಕಳಶಪೂಜೆ, ನೈವೇದ್ಯ, ಆವರಣದೇವತೆಗಳು ಇತ್ಯಾದಿ ಅನೇಕವಿಷಯಗಳನ್ನು ಆಚಾರ್ಯರು ಪ್ರಥಮಾಧ್ಯಾಯದಲ್ಲಿ ಹೇಳಿದ್ದಾರೆ.

# ದ್ವಿತೀಯಾಧ್ಯಾಯವಿಷಯ

**ಮಾತೃಕಾನ್ಯಾಸ**

**ಯಸ್ಯ ಕಸ್ಯಾಪಿ ಮಂತ್ರಸ್ಯ ನ್ಯಾಸಃ ಪಂಚಾಶದಕ್ಷರೈಃ ।**
**ವೀರ್ಯದಃ...................................॥ (ತಂ.ಸಾ. 2-1)**

ಯಾವುದೇ ಮಂತ್ರಕ್ಕಾದರೂ ಅಕಾರಾದಿ ಐವತ್ತು ಅಕ್ಷರಗಳಿಂದ ಮತ್ತು ಕ್ಷಕಾರದಿಂದ ದೇಹದ ವಿವಿಧ ಅವಯವಗಳಲ್ಲಿ ನ್ಯಾಸವನ್ನು ಮಾಡಬೇಕು. ಈ ನ್ಯಾಸದಿಂದ ಮಂತ್ರಗಳು ಸಿದ್ಧಿಪ್ರದವಾಗುತ್ತವೆ. ನ್ಯಾಸ ಎಂದರೆ ಆಯಾ ಸ್ಥಾನಗಳಲ್ಲಿ ಭಗವಂತನ ಅಸ್ತಿತ್ವದ ಅನುಸಂಧಾನ. 'ಅಂ ಅಜಾಯ ನಮಃ' ಇತ್ಯಾದಿಮಂತ್ರಗಳಿಂದ ದೇಹದ ವಿವಿಧ ಸ್ಥಾನಗಳಲ್ಲಿ ಭಗವಂತನನ್ನು ಅನುಸಂಧಾನಿಸಬೇಕು. ಇದನ್ನೇ ಮಾತೃಕಾನ್ಯಾಸ ಎಂದು ಕರೆಯುವರು. ಮಾತೃಕಾಮಂತ್ರ ಪ್ರತಿಪಾದ್ಯವಾದ ಭಗವಂತನನ್ನು ಹೇಳುವ ನಾಮವನ್ನು ಪಠಿಸದೇ ಕೇವಲ 'ಓಂ ಅಂ ಓಂ' 'ಓಂ ಆಂ ಓಂ' ಎಂದು ನ್ಯಾಸವನ್ನು ಮಾಡಬೇಕು ಎಂದು ಇನ್ನೊಂದು ಪಕ್ಷವೂ ಉಂಟು. ಯೋಗದೀಪಿಕಾದಲ್ಲಿಯೂ ಸಹ 'ಸತಾರಶ್ಚ ಲಿಪಿರ್ಜಪೇತ್' ಎಂದು ಪ್ರತಿಪಾದ್ಯರೂಪಗಳ ನಾಮವನ್ನು ಹೇಳದೆ ಕೇವಲ ಓಂಕಾರದಿಂದ ವರ್ಣಗಳ ನ್ಯಾಸವನ್ನು ಹೇಳಿದ್ದಾರೆ. ಈ ಮಾತೃಕಾನ್ಯಾಸವನ್ನು ಮಂತ್ರಜಪಕ್ಕಿಂತಲೂ ಪೂರ್ವದಲ್ಲಿ ಮತ್ತು ಸಮಾಪ್ತಿಯಲ್ಲಿ ಮಾಡಬೇಕು.

**ಪ್ರಾಣಾಯಾಮ**

**ಪ್ರಾಣಾಯಾಮೋ ರೇಚಯಿತ್ವಾ ಪೂರಯಿತ್ವಾ ಚ ಕುಂಭಕೇ । (ತಂ.ಸಾ. 2-4)**

ಬಲಮೂಗಿನ ಹೊಳ್ಳೆಯಿಂದ ಗಾಳಿಯನ್ನು ಹೊರಬಿಟ್ಟು ಎಡಮೂಗಿನ ಹೊಳ್ಳೆಯಿಂದ ಶುದ್ಧವಾದ ವಾಯುವನ್ನು ಸ್ವೀಕರಿಸಿ ಅಂಗುಲಿಗಳಿಂದ ಮೂಗಿನ ಹೊಳ್ಳೆಗಳನ್ನು ಬಂಧಿಸಿ ಸುಷುಮ್ನಾನಾಡಿಯಲ್ಲಿ ವಾಯುವನ್ನು ನಿರೋಧಿಸುವದನ್ನು ಪ್ರಾಣಾಯಾಮ ಎಂದು ಕರೆಯುತ್ತಾರೆ.

**ಪ್ರಾಣೋ ವಾಯುರಿತಿಪ್ರೋಕ್ತ ಆಯಾಮಸ್ತನ್ನಿರೋಧನಮ್ ।**
**ಪ್ರಾಣಾಯಾಮ ಇತಿ ಪ್ರೋಕ್ತೋ ಯೋಗಿನಾಂ ಯೋಗಸಾಧನಮ್ ॥**

ಎಂಬ ಪ್ರಮಾಣದಲ್ಲಿಯೂ ಸಹ ಇದನ್ನು ಸ್ಪಷ್ಟಪಡಿಸಲಾಗಿದೆ. ಆಚಾರ್ಯರು ಇದರ ವಿವರವನ್ನು ಚತುರ್ಥಾಧ್ಯಾಯದಲ್ಲಿ ವಿಶದವಾಗಿ ನಿರೂಪಿಸಿರುವರು.

36 ಅಥವಾ 24 ಅಥವಾ 12 ಬಾರಿ ಓಂಕಾರಗಳಿಂದ ಪ್ರಾಣಾಯಾಮವನ್ನು ಮಾಡಬೇಕು. ಶಕ್ತಾಶಕ್ತವಿಷಯಕ, ಅಥವಾ ಪ್ರವಚನಾದಿಸತ್ಕಾರ್ಯದಲ್ಲಿ ವ್ಯಾಸಕ್ತನಾದವನಿಗೆ ಆಸಕ್ತನಾಗದವನಿಗೆ, ಅಥವಾ ಸ್ಥೂಲಸೂಕ್ಷ್ಮಮಂತ್ರಗಳ ಭೇದದಿಂದ ಈ ಪಕ್ಷತ್ರಯಗಳನ್ನು ಆಚಾರ್ಯರು ಹೇಳಿರುವರು. ಇಷ್ಟು ಶಕ್ತನಾಗದಿದ್ದವನಿಗೆ 'ಮಂತ್ರಾವೃತ್ತಿಂ ತು ಷಡ್ವಾರಂ ಕುರ್ಯಾದ್ರೇಚಾದಿಪೂರ್ವಕಮ್' ಎಂದು ಆರು ಬಾರಿ ಮಂತ್ರಾವೃತ್ತಿಯನ್ನಾದರೂ ಮಾಡಬೇಕು ಎಂದು ಗೌತಮೀ ತಂತ್ರದಲ್ಲಿ ಹೇಳಿದೆ. 'ತಾರೈಃ' ಎಂದು ಆಚಾರ್ಯರು ಹೇಳಿರುವದರಿಂದ ಎಲ್ಲ ಮಂತ್ರಜಪದಲ್ಲಿಯೂ ಸಹ

ಪ್ರಣವಮಂತ್ರದಿಂದ ಪ್ರಾಣಾಯಾಮವನ್ನು ಮಾಡಬೇಕು ಎಂದು ಈ ಪಕ್ಷದ ಅಭಿಪ್ರಾಯ. ಇದು ಯತಿಮಾತ್ರವಿಷಯಕ ಅಥವಾ ಶುದ್ಧಗೃಹಸ್ಥರಿಗೂ ಈ ಪಕ್ಷ ಎಂದು ಕೆಲವರು ಹೇಳುತ್ತಾರೆ.

ಅಥವಾ, 'ತತ್ತನ್ಮಂತ್ರೇಣ ವಾ ಕಾರ್ಯಃ' ಎಂಬ ವಾಕ್ಯಾನುಗುಣವಾಗಿ ಆಯಾ ಮಂತ್ರಗಳಿಂದ ಪೂರ್ವೋಕ್ತಸಂಖ್ಯಾನುಗುಣವಾಗಿ ಪ್ರಾಣಾಯಾಮವನ್ನು ಮಾಡಬೇಕು.

ಅಥವಾ ದಶಪ್ರಣವಯುಕ್ತವಾದ ಗಾಯತ್ರೀಮಂತ್ರದಿಂದ ಪ್ರಾಣಾಯಾಮವನ್ನು ಮಾಡಬೇಕು.

ಛಲಾರಿ ಆಚಾರ್ಯರು ಆಯಾ ಮಂತ್ರದಿಂದ ಪ್ರಾಣಾಯಾಮ ಮಾಡುವ ಪಕ್ಷದಲ್ಲಿ 24 ಅಕ್ಷರದಿಂದ ಕೂಡಿದ ಗಾಯತ್ರೀಮಂತ್ರದಿಂದ ಪ್ರಾಣಾಯಾಮವು ಪ್ರಾಪ್ತವಾಗುತ್ತದೆ. ಆದರೆ ಹಾಗಲ್ಲ. ಅಲ್ಲಿ ವಿಶೇಷವುಂಟು ಎಂದು ಹೇಳಲು ಈ ವಾಕ್ಯವು ಪ್ರವೃತ್ತ ಎಂದು 'ಗಾಯತ್ರ್ಯಾ ದಶತಾರಕೈಃ' ಎಂಬ ವಾಕ್ಯಕ್ಕೆ ಅವತರಣಿಕೆಯನ್ನು ಇತ್ತು ದಶೋಂಕಾರ ಮತ್ತು ಗಾಯತ್ರೀಶಿರಸ್ಸಿನಿಂದ ಕೂಡಿದ ಗಾಯತ್ರೀಮಂತ್ರದಿಂದ ಪ್ರಾಣಾಯಾಮವನ್ನು ಮಾಡಬೇಕು ಎಂದು ಹೇಳಿದ್ದಾರೆ. 'ಓಂ ಭೂಃ ಓಂ ಭುವಃ ಓಂ ಸ್ವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ಓಂ ಆಪೋಜ್ಯೋತೀ-ರಸೋಽಮೃತಂ ಬ್ರಹ್ಮ ಭೂರ್ಭುವಃಸ್ವರೋಮ್' ಎಂದು ದಶೋಂಕಾರಯುಕ್ತಗಾಯತ್ರೀಮಂತ್ರ. ಓಂ ಆಪೋಜ್ಯೋತೀರಸೋಽಮೃತಮ್' ಎಂಬುದು ಗಾಯತ್ರೀಸಿರಸ್ಸು. ಇದನ್ನು ಯೋಗ ಯಾಜ್ಞ್ಯವಲ್ಕ್ಯರು ಹೇಳಿದ್ದಾರೆ-

**ಭೂರ್ಭುವಃಸ್ವರ್ಮಹರ್ಜನಸ್ತಪಃ ಸತ್ಯಂ ತಥೈವ ಚ ।**
**ಸಪ್ತೋಂಕಾರಸಮಾಯುಕ್ತಂ ತಥಾ ತತ್ಸವಿತುಃ ಪರಮ್ ।**
**ಓಮಾಪೋಜ್ಯೋತಿರಿತ್ಯೇತ್ ಶಿರಃ ಪಶ್ಚಾತ್ಪ್ರಯೋಜಯೇತ್ ॥ ಎಂದು.**

ಶ್ರೀರಘುನಾಥತೀರ್ಥರು ತತ್ವಕಣಿಕೆಯಲ್ಲಿ ದಶೋಂಕಾರಯುಕ್ತಗಾಯತ್ರೀಮಂತ್ರದಿಂದ ಪ್ರಾಣಾಯಾಮಕ್ಕೆ ವಾನಪ್ರಸ್ಥರಿಗೆ ಮಾತ್ರ ಅಧಿಕಾರ ಎಂದು ಹೇಳಿದ್ದಾರೆ. ಆಯಾ ಮಂತ್ರಗಳಿಂದ ಪ್ರಾಣಾಯಾಮವು ಈಗ ಪ್ರಚಲಿತವಾಗಿದೆ. ಕೇವಲ ಓಂಕಾರದಿಂದ ಪ್ರಾಣಾಯಾಮವು ಯತಿಗಳಿಗೆ ವಿಹಿತ ಎಂದು ಸಂಪ್ರದಾಯವನ್ನು ತಿಳಿದವರು ಹೇಳುತ್ತಾರೆ. ಶುದ್ಧರಾದ ಗೃಹಸ್ಥರೂ ಸಹ ಓಂಕಾರದಿಂದ ಪ್ರಾಣಾಯಾಮವನ್ನು ಮಾಡಬಹುದು ಎಂದೂ ಹೇಳುತ್ತಾರೆ.

**ಪಾಪಪುರುಷ ವಿಸರ್ಜನ**

**ಆದಾವೇವ ಜಪೇ ಕುರ್ಯಾತ್ ಶೋಷಣಂ ದಹನಂ ಪ್ಲುತಿಮ್ ।**
**ವಾಯ್ವಗ್ನಿವಾರುಣೈರ್ಬೀಜೈರ್ಧ್ಯಾತ್ವಾ ತನ್ಮಂಡಲೇ ಹರಿಮ್ ॥**

ಜಪಪ್ರಾರಂಭಕಾಲದಲ್ಲಿ ಪ್ರಾಣಾಯಾಮ ಮಾಡುವ ಮುಂಚೆ ವಾಯು ಅಗ್ನಿ ವರಣ ಬೀಜಾಕ್ಷರಗಳಿಂದ ಉದರ ಹೃದಯ ಶಿರಸ್ಸಿನಲ್ಲಿ ಆಯಾ ದೇವತಾ ಮಂಡಲದಲ್ಲಿ ಶ್ರೀಹರಿಯನ್ನು ನೆನೆದು ಪಾಪಪುರುಷನನ್ನು ಸುಡಬೇಕು.

**'ವಾಯ್ವಗ್ನಿವರುಣಾನಾಂ ಚ ಬೀಜಾನಿ ಯರವಾಃ ಕ್ರಮಾತ್'** (31ಶ್ಲೋ) ಎಂದು ಪದ್ಯಮಾಲಾದಲ್ಲಿ ಹೇಳಿದಂತೆ 'ಯಂ' ವಾಯುಬೀಜ, 'ರಂ' ಅಗ್ನಿಬೀಜ, 'ವಂ' ವರುಣಬೀಜ ವಾಗಿದೆ. ವಾಯುಬೀಜದಿಂದ ಪಾಪಪುರುಷನ ಶೋಷಣ (ಒಣಗಿಸುವದು) ಅಗ್ನಿಬೀಜದಿಂದ ಪಾಪಪುರುಷನ ದಹನ, ವರುಣಬೀಜದಿಂದ ಕ್ಷಾಲನ ಎಂದು ತಿಳಿಯಬೇಕು. ಇದನ್ನು ಪದ್ಯಮಾಲಾದಲ್ಲಿ ಇದರ ವಿವರಣೆಯನ್ನು ಕಾಣುತ್ತೇವೆ-

**ತತಶ್ಚ ಬ್ರಹ್ಮಹತ್ಯೇತಿ ಧ್ಯಾಯೇತ್ಸ್ವಂ ಪಾಪಪೂರುಷಮ್ ।**
**ಆನೀಯ ನಾಭಿದೇಶಂ ತಂ ವಾಯುಬೀಜೇನ ಶೋಷಯೇತ್ ॥**

**ಹೃದ್ಯಗ್ನಿಬೀಜತೋ ದಗ್ಧ್ವಾ ಭಸ್ಮ ವಾಮನಸಾ ತ್ಯಜೇತ್ ।**
**ವಾರುಣೇನಾಥ ಬೀಜೇನ ಶಿರಃಸ್ಥಾಮೃತಧಾರಯಾ ।**
**ಪ್ಲಾವಯೇತ್ಸರ್ವಗಾತ್ರಾಣಿ ಕೃತ್ವಾಽಽತ್ಮಾನಂ ತತೋ ಹೃದಿ ॥ (33-35)**

'ಬ್ರಹ್ಮಹತ್ಯಾ ಶಿರಸ್ಕಂ ಚ....' ಮಂತಾದ ಮಂತ್ರದಿಂದ ಪಾಪಪುರುಷನ ಸ್ವರೂಪವನ್ನು ಎಡ ಕುಕ್ಷಿಯಲ್ಲಿ ಚಿಂತಿಸಿ ನಾಭಿದೇಶಕ್ಕೆ ಪಾಪಪುರುಷನನ್ನು ತಂದು 'ಯಂ' ಎಂಬ ವಾಯು ಬೀಜದಿಂದ ಒಣಗಿದೆ ಎಂದು ಚಿಂತಿಸಬೇಕು. ನಂತರ ಹೃದಯದಲ್ಲಿ 'ರಂ' ಎಂಬ ಅಗ್ನಿಬೀಜದಿಂದ ಭಸ್ಮವಾಗಿದೆ ಎಂದು ಚಿಂತಿಸಿ ಎಡ ಮೂಗಿನ ಹೊಳ್ಳೆಯಿಂದ ಆ ಬೂದಿಯನ್ನು ಹೊರಹಾಕಬೇಕು. ನಂತರ 'ವಂ' ಎಂಬ ವರುಣ ಮಂತ್ರದಿಂದ ತಲೆಯಲ್ಲಿರುವ ಅಮೃತಧಾರೆಯಿಂದ ತನ್ನ ಶರೀರವು ಕ್ಷಾಲಿತವಾಗಿದೆ ಎಂದು ಧ್ಯಾನಿಸಬೇಕು ಹೀಗೆ ಪಾಪಪುರುಷವಿಸರ್ಜನೆಯ ಕ್ರಮವಾಗಿದೆ.

ಮೊದಲಿಗೆ ಪಾಪಪುರುಷವಿಸರ್ಜನೆ ನಂತರ ದೇಹಶುದ್ಧಿ ನಂತರ ಪ್ರಾಣಾಯಾಮ, ನಂತರ ತತ್ತ್ವನ್ಯಾಸ ತದನಂತರ ಮಾತೃಕಾನ್ಯಾಸ, ನಂತರ ಮಂತ್ರಜಪವನ್ನು ಮಾಡಬೇಕು ಎಂದು ಇಲ್ಲಿ ಕ್ರಮವನ್ನು ತಿಳಿಯಬೇಕು.

ಮಾತೃಕಾನ್ಯಾಸಕ್ಕಿಂತಲೂ ಪೂರ್ವದಲ್ಲಿಯೇ ತತ್ವನ್ಯಾಸವನ್ನು ಮಾಡಬೇಕು.

**ಪ್ರಥಮಂ ವೈಷ್ಣವೇ ಮಂತ್ರೇ ತತ್ತ್ವಾನಾಂ ನ್ಯಸನಂ ಪುರಾ ।**
**ಏಕಪಂಚಾಶದ್ವರ್ಣಾನಾಂ ನ್ಯಸನಂ ಚ ತತಃ ಪರಮ್ ॥ (ಗೌತಮೀತಂತ್ರ)**

**ಆದಾವಷ್ಟಾಕ್ಷರೇ ಮಂತ್ರೇ ತತ್ತ್ವನ್ಯಾಸಂ ಸಮಾಚರೇತ್ ।**
**ಪಶ್ಚಾದಜಾದಿಮಂತ್ರಾಣಾಂ ನ್ಯಸನಂ ಪರಿಕೀರ್ತಿತಮ್ ॥ (ಪಾದ್ಮಸಂಹಿತಾ)**

ಮುಂತಾದ ಪ್ರಮಾಣಗಳಲ್ಲಿ ತತ್ತ್ವನ್ಯಾಸವನ್ನು ಮಾತೃಕಾನ್ಯಾಸಕ್ಕಿಂತಲೂ ಪೂರ್ವದಲ್ಲಿ ಮಾಡಬೇಕು ಎಂದು ಹೇಳಿದೆ.

**ಹೋಮವಿಧಾನ**

**ಉಪಸರ್ಗೇಷು ಜಾತೇಷು ದೈವಭೂತಾತ್ಮಹೇತುಷು ।**
**ಆಯುಷೇ ವಾಽಥ ಶಾಂತ್ಯೈ ಶ್ರಿಯೈ ವಾ ಪುಣ್ಯವೃದ್ಧಯೇ ॥**

**ಯೋಗ್ಯತಾಯೈ ಮಂತ್ರಸಿದ್ಧ್ಯೈ ವಿಷ್ಣೋಃಪ್ರೀತ್ಯರ್ಥಮೇವ ವಾ ।**
**ಜುಹುಯಾತ್ಸಹಸ್ರಮಯುತಂ ಲಕ್ಷ್ಯಂ ಕೋಟಿಮಥಾಪಿ ವಾ ॥ (ತಂ.ಸಾ. 2-13,14)**

ಪೂಜಾದಿಸತ್ಕರ್ಮಗಳಿಗೆ ಬಂದೊದಗಿದ ವಿಘ್ನಪರಿಹಾರಕ್ಕಾಗಿ ಹೋಮವನ್ನು ಮಾಡಬೇಕು. ದೈವಿಕವಾದ ಉಲ್ಕಾಪಾತಾದಿಗಳ ಪರಿಹಾರಕ್ಕಾಗಿ, ಅನಾವೃಷ್ಟ್ಯಾದಿಗಳ ಪರಿಹಾರಕ್ಕಾಗಿ, ಭೌತಿಕವಾದ ಭೂಕಂಪಾದಿಗಳ ಪರಿಹಾರಕ್ಕಾಗಿ, ದೈಹಿಕವಾದ ದುಃಸ್ವಪ್ನಾದಿವಿಘ್ನಗಳ ಪರಿಹಾರಕ್ಕಾಗಿ, ಆಯುರ್ವೃದ್ಧಿಗಾಗಿ, ಸಂಪತ್ತಿಗಾಗಿ, ಪುಣ್ಯಕ್ಕಾಗಿ, ಅಥವಾ ಯೋಗ್ಯತಾ ಸಂಪಾದನೆಗಾಗಿ, ಮಂತ್ರಸಿದ್ಧಿಗಾಗಿ ಅಥವಾ ಕೇವಲ ವಿಷ್ಣುಪ್ರೀತ್ಯರ್ಥವಾಗಿ ಭಗವಂತನನ್ನು ಸ್ಮರಿಸಿ ಸಾವಿರ, ಹತ್ತು ಸಾವಿರ, ಲಕ್ಷ ಅಥವಾ ಕೋಟಿಸಂಖ್ಯಾಕವಾದ ಮಂತ್ರಹೋಮವನ್ನು ಮಾಡಬೇಕು.

ನಿಮಿತ್ತಗಳು ಅಲ್ಪವಾದಾಗ ಅಲ್ಪಸಂಖ್ಯಾಕವಾದ ಹೋಮ. ನಿಮಿತ್ತಗಳು ಬಹಳವಿದ್ದಾಗ ಬಹುಸಂಖ್ಯಾಕವಾದ ಹೋಮ ಎಂದು ಇಲ್ಲಿ ವಿಕಲ್ಪದ ಅಭಿಪ್ರಾಯವನ್ನು ತಿಳಿಯಬೇಕು. ಅಥವಾ ಶಕ್ತಾಶಕ್ತವಿಷಯಕವಾದ ವಿಕಲ್ಪ ಎಂದು ಅಭಿಪ್ರಾಯ.

ದ್ವಿತೀಯಾಧ್ಯಾಯದಲ್ಲಿ ಆಚಾರ್ಯರು ಹೋಮಕುಂಡ ಲಕ್ಷಣ, ಯೋನಿಲಕ್ಷಣ, ಹೋಮದ್ರವ್ಯಗಳ ನಿರೂಪಣೆ ಇತ್ಯಾದಿ ಇನ್ನೂ ಅನೇಕ ವಿವಿಷಯಗಳನ್ನು ನಿರೂಪಿಸಿದ್ದಾರೆ.

## ತೃತೀಯಾಧ್ಯಾಯವಿಷಯ

ಈ ತೃತೀಯಾಧ್ಯಾಯದಲ್ಲಿ ಪ್ರತಿಮಾನಿರ್ಮಾಣವಿಧಿ, ಪ್ರತಿಮಾಲಕ್ಷಣ, ಪ್ರತಿಮಾಸ್ಥಾಪನೆ, ದೇವಾಲಯನಿರ್ಮಾಣವಿಧಿ, ಜೀರ್ಣದೇವಾಲಯೋದ್ಧಾರ, ಸಂಪ್ರೋಕ್ಷಣವಿಧಿ ಮುಂತಾದ ಅನೇಕವಿಷಯಗಳನ್ನು ನಿರೂಪಿಸಿದ್ದಾರೆ.

### ಪ್ರತಿಮಾಲಕ್ಷಣ

**'ಪೂಜ್ಯಶ್ಚ ಭಗವಾನ್ನಿತ್ಯಂ ಚಕ್ರಾಬ್ಜಾದಿಕಮಂಡಲೇ'** ಎಂದು ಪ್ರಥಮಾಧ್ಯಾಯದಲ್ಲಿ ಭಗವಂತನ ಪೂಜೆಯನ್ನು ಆಚಾರ್ಯರು ವಿಧಿಸಿದ್ದಾರೆ. ಆದರೆ ಅಜ್ಞರು ಪ್ರತಿಮೆಯಲ್ಲಿಯೇ ಪೂಜೆಯೆನ್ನು ಮಾಡುವರು. 'ಪ್ರತಿಮಾಸ್ವಪ್ರಬುದ್ಧಾನಾಂ' ಎಂದು ಆಚಾರ್ಯರು ಅಜ್ಞರಿಗೆ ಪ್ರತಿಮೆಯಲ್ಲಿ ಪೂಜೆಯನ್ನು ವಿಧಿಸಿರುವರು. ಆ ಪ್ರತಿಮೆಯು ಸಲ್ಲಕ್ಷಣೋಪೇತವಾಗಿದ್ದರೆ ಗ್ರಾಹ್ಯವಾಗುತ್ತದೆ. **'ಊರ್ಧ್ವದೃಷ್ಟಿಮಧೋದೃಷ್ಟಿಂ ತಿರ್ಯಗ್ಗ್ಯದೃಷ್ಟಿಂ ವಿವರ್ಜಯೇತ್'** ಊರ್ಧ್ವದೃಷ್ಟಿ, ಅಧೋದೃಷ್ಟಿ, ವಕ್ರದೃಷ್ಟಿ ಇರುವ ಪ್ರತಿಮೆಯನ್ನು ಪೂಜಿಸಬಾರದು ಎಂದು ತಂತ್ರಶಾಸ್ತ್ರದಲ್ಲಿ ನಿಷೇಧಿಸಲಾಗಿದೆ. ಆದ್ದರಿಂದ ಪ್ರತಿಮೆಯ ಲಕ್ಷಣವನ್ನು ತಿಳಿಯುವುದು ಅತ್ಯಾವಶ್ಯಕ. ಆದ್ದರಿಂದ ಆಚಾರ್ಯರು ಪ್ರಥಮತಃ ಪ್ರತಿಮಾಲಕ್ಷಣವನ್ನು ತಿಳಿಸಿದ್ದಾರೆ.

**ಪ್ರತಿಷ್ಠಾಂ ಕಾರಯನ್ ವಿಷ್ಣೋಃ ಕುರ್ಯಾತ್ ಸುಪ್ರತಿಮಾಂ ಬುಧಃ ।**
**ಲೋಹೈರ್ವಾ ಶಿಲಯಾ ದಾರ್ವಾ ಮೃದಾ ವಾಽಪಿ ಯಥಾಕ್ರಮಮ್ ॥ (3-1)**

ವಿಷ್ಣುಪ್ರತಿಮೆಯ ಪ್ರತಿಷ್ಠೆಯನ್ನು ಮಾಡುವ ಅಥವಾ ಮಾಡಿಸುವ ಜ್ಞಾನಿಯು ಲೋಹಗಳಿಂದ

ಕಲ್ಲಿನಿಂದ ಮರದಿಂದ ಅಥವಾ ಮಣ್ಣಿನಿಂದ ಸುಲಕ್ಷಣವಾದ ಪ್ರತಿಮೆಯನ್ನು ಮಾಡಿಸಬೇಕು. ನಿಪುಣನಾಗಿದ್ದರೆ ತಾನೆ ಮಾಡಬೇಕು.

**'ಸುವರ್ಣಂ ರಜತಂ ತಾಮ್ರಂ ತ್ರಿವಿಧಂ ಲೋಹಮಿಷ್ಯತೇ'** ಸುವರ್ಣ, ಬೆಳ್ಳಿ, ತಾಮ್ರ ಎಂದು ಲೋಹವು ಮೂರು ವಿಧವಾಗಿದೆ. ಈ ಮೂರು ವಿಧ ಲೋಹಗಳಲ್ಲಿ ಯಾವುದಾದರು ಒಂದು ಲೋಹದಿಂದ ಪ್ರತಿಮೆಯನ್ನು ಮಾಡಿಸಬೇಕು. ಅಥವಾ ಕಲ್ಲಿನಿಂದ ಅಥವಾ ಕಟ್ಟಿಗೆಯಿಂದ ಅಥವಾ ಮಣ್ಣಿನಿಂದ ವಿಷ್ಣುಪ್ರತಿಮೆಯನ್ನು ಮಾಡಿಸಬೇಕು. ಇಲ್ಲಿ ಪ್ರಾಶಸ್ತ್ಯಕ್ರಮದಿಂದ ಆಚಾರ್ಯರು 'ಲೋಹೈರ್ವಾ...' ಇತ್ಯಾದಿಯಾಗಿ ಅನೇಕ ಕಲ್ಪಗಳನ್ನು ಹೇಳಿದ್ದಾರೆ. ಉತ್ತಮವಾದ ಪೂರ್ವಪೂರ್ವದ್ರವ್ಯಗಳು ಸಿಗದಿದ್ದಾಗ ಮುಂದಿನ ದ್ರವ್ಯಗಳಿಂದ ಪ್ರತಿಮೆಯನ್ನು ಮಾಡಿಸಬೇಕು. ಪಾದ್ಮಸಂಹಿತಾದಲ್ಲಿ ಉತ್ತಮದ್ರವ್ಯಗಳಿಂದ ನಿರ್ಮಿತವಾದ ಪ್ರತಿಮೆಗಳಿಂದ ಪ್ರಯೋಜನವನ್ನು ಹೇಳಿರುವರು–

**ಹಿರಣ್ಮಯೀ ಪ್ರತಿಕೃತಿಃ ಸರ್ವಸಂಪತ್ಕರೀ ಭವೇತ್ ।**
**ವಿತ್ತಂ ಪಶುಶ್ಚ ವಿಜಯಂ ವಿಜ್ಞಾನಂ ರಾಜತೀ ಫಲಮ್ ॥**

**ತಾಮ್ರಾ ಧರ್ಮಂ ಚ ವೃದ್ಧಿಂ ಚ ಕರೋತಿ ಬಹುಸೌಖ್ಯದಾ ।**
**ಖೇದಪ್ರದಾ ಶಿಲಾಜಾ ಚ ತೇಜೋದಾ ದಾರುಜಾ ತಥಾ ।**
**ಶುಭ್ರಾ ಪ್ರೋಕ್ತಾ ಮೃಣ್ಮಯೀ ಚ ಪೌತ್ತಲೀ ಪುತ್ರನಾಶಿನೀ ॥** ಎಂದು.

ಬಂಗಾರದ ಪ್ರತಿಮೆಯು ಎಲ್ಲ ಸಂಪತ್ತನ್ನು ನೀಡುತ್ತದೆ. ಬೆಳ್ಳಿಯಿಂದ ನಿರ್ಮಿತವಾದ ಪ್ರತಿಮೆಯು ಧನ, ಪಶು, ವಿಜಯ, ವಿಜ್ಞಾನವನ್ನು ನೀಡುತ್ತದೆ. ತಾಮ್ರನಿರ್ಮಿತವಾದ ಪ್ರತಿಮೆಯು ಧರ್ಮವನ್ನು, ಧರ್ಮದ ವೃದ್ಧಿಯನ್ನು, ಬಹುಸೌಖ್ಯವನ್ನು ನೀಡುತ್ತದೆ.

ಈ ಪ್ರತಿಮೆಯು ಗಾತ್ರದಿಂದ 96 ಅಂಗುಲದಿಂದ ಕೂಡಿರಬೇಕು. ಯೋಗಾಸನದಲ್ಲಿ ಕುಳಿತ ವೇದವ್ಯಾಸಾದಿಪ್ರತಿಮೆಗಳನ್ನು, ನಿಂತಿರುವ ಭಂಗಿಯಲ್ಲಿರುವ ರಾಮಾದಿಪ್ರತಿಮೆಗಳನ್ನು, ಶೇಷಶಾಯಿಯಾದ ಅನಂತಶಯನಾದಿಪ್ರತಿಮೆಗಳನ್ನು ಮುಮುಕ್ಷುಗಳಿಗೆ ವ್ಯಾಖ್ಯಾನಿಸುವಂತಿರುವ ಹಯಗ್ರೀವಾದಿ ಪ್ರತಿಮೆಗಳನ್ನು ನಿರ್ಮಿಸಿ ಪೂಜಿಸಬೇಕು.

ಪುರುಷಪ್ರಮಾಣ, ಹಸ್ತಪ್ರಮಾಣ, ಪ್ರಾದೇಶಪ್ರಮಾಣ ಎಂದು ಪ್ರತಿಮೆಗಳು ಅನೇಕವಾಗಿವೆ. ಇಲ್ಲಿ ಆಚಾರ್ಯರು ಪುರುಷಪ್ರಮಾಣಪ್ರತಿಮೆಯ ಲಕ್ಷಣವನ್ನೇ ಹೇಳಿದ್ದಾರೆ. ಅಂಗುಲಿ ಪ್ರಮಾಣವನ್ನೂ ಸಹ ಎಲ್ಲೆಡೆ ಪ್ರತಿಮೆನಿರ್ಮಾಣ ಮಾಡುವ ಪುರುಷನ ಅಂಗುಲಿಪ್ರಮಾಣವನ್ನೇ ಸ್ವೀಕರಿಸಬೇಕು. 'ಸ್ವಾಂಗುಲ್ಯಾ ಮಧ್ಯರೇಖಾಯಾಃ' (3–53) 'ದೀರ್ಘಾಶ್ಚ ಕಲಮಾಸ್ತಿಸ್ರಃ' (3–52) ಎಂದು ಅಂಗುಲಿಯ ಲಕ್ಷಣವನ್ನು ಹೇಳಿರುವರು. ಒಂದರ ತುದಿಗೊಂದರಂತೆ ಉದ್ದವಾಗಿ ಮೂರು ದೀರ್ಘವಾದ ಭತ್ತದ ಕಾಳನ್ನು ಇಟ್ಟಾಗ ಅದು ಒಂದು ಅಂಗುಲ ಎಂದು ಲೆಕ್ಕಕ್ಕೆ ಬರುತ್ತದೆ. ಈ ಅಂಗುಲಪ್ರಮಾಣದಿಂದ 96 ಅಂಗುಲಪರ್ಯಾಪ್ತವಾದ ಪ್ರತಿಮೆಯನ್ನು ನಿರ್ಮಿಸಬೇಕು. ಈ ವಿಧವಾದ ಪರಿಮಾಣವು ಪುರುಷಪ್ರಮಾಣದ ಪ್ರತಿಮೆಯಲ್ಲಿಯೇ ಬರುತ್ತದೆ. ಪ್ರಾದೇಶಾದಿ

ಪ್ರತಿಮೆಗಳಿಗೆ ಈ ಪ್ರಮಾಣವು ಬರುವದಿಲ್ಲ. ಆದ್ದರಿಂದ ಇಲ್ಲಿ ಪುರುಷಪ್ರಮಾಣದ ಪ್ರತಿಮೆಯ ಲಕ್ಷಣವನ್ನು ಆಚಾರ್ಯರು ಹೇಳಿರುವರು ಎಂದು ಛಲಾರಿ ಆಚಾರ್ಯರು ವ್ಯಾಖ್ಯಾನಿಸುತ್ತಾರೆ.

ಶ್ರೀರಘುನಾಥತೀರ್ಥರು, ಪ್ರಾದೇಶಾದಿಪ್ರಮಾಣದ ಪ್ರತಿಮೆಗಳಿಗೂ ಈ ಲಕ್ಷಣವು ಉಪಪನ್ನವಾಗುತ್ತದೆ ಎಂದು ವ್ಯಾಖ್ಯಾನಿಸಿದ್ದಾರೆ. ಚಿಕೀರ್ಷಿತವಾದ ಪ್ರತಿಮೆಯನ್ನು ಮನಸ್ಸಿನಲ್ಲಿ ಚಿಂತಿಸಿ ಪ್ರತಿಮಾಪ್ರಮಾಣವನ್ನು ಹತ್ತು ಭಾಗವನ್ನಾಗಿ ವಿಂಗಡಿಸಿ, ಆ ಒಂದೊಂದು ಭಾಗವನ್ನು 12ಭಾಗವನ್ನಾಗಿ ಮಾಡಿದಾಗ ಅಲ್ಲಿ ಒದಗಿದ ಒಂದು ಭಾಗವನ್ನು ಅಂಗುಲಿಪರಿಮಾಣವೆಂದು ವಿವಕ್ಷಿಸಿ 96 ಅಂಗುಲವಾಗುಂತಹ ಪ್ರತಿಮೆಯನ್ನು ನಿರ್ಮಿಸಬೇಕು. ಈ ವಿಧವಾದ ಲಕ್ಷಣವು ಸರ್ವಪ್ರತಿಮಾಸಾಧಾರಣವಾಗಿದೆ ಎಂದು ವ್ಯಾಖ್ಯಾನಿಸಿದ್ದಾರೆ.

ವೆಂಕಟಪತ್ಯಾಚಾರ್ಯರು ಪ್ರತಿಮಾಲಕ್ಷಣದ ಸಮಾಪ್ತಿಭಾಗದಲ್ಲಿ **'ಇದಂ ಭಗವತ್ಪಾದೋಕ್ತಂ ಪ್ರತಿಮಾಪರಿಮಾಣಂ ದೇವಾಲಯಗತಪ್ರತಿಮಾಯಾ ಏವ । ಗೇಹೇ ತ್ವನ್ಯದೇವ ದ್ರಷ್ಟವ್ಯಮ್ ।'** ಇಲ್ಲಿ ಶ್ರೀಮದಾಚಾರ್ಯರು ಹೇಳಿದ ಪ್ರತಿಮೆಲಕ್ಷಣವು ದೇವಾಲಯದಲ್ಲಿರುವ ಪ್ರತಿಮೆಯ ಲಕ್ಷಣವಾಗಿದೆ. ಮನೆಯಲ್ಲಿರುವ ಪ್ರಾದೇಶಾದಿಪರಿಮಿತವಾದ ಪ್ರತಿಮೆಯ ಲಕ್ಷಣವು ಬೇರೆಯಾಗಿದೆ ಎಂದು ವ್ಯಾಖ್ಯಾನಿಸಿದ್ದಾರೆ.

'ಶಯಾನಾಂ ನಾರ್ಚಯೇದ್ಗೇಹೇ ನ ಚ ಮೃದ್ದಾರುಜಾಂ ತಥಾ' ಎಂದು ಪ್ರಮಾಣಾನುಗುಣವಾಗಿ ಮಲಗಿದ ಭಂಗಿಯಲ್ಲಿರುವ, ಮಣ್ಣಿನ ಮತ್ತು ದಾರುಮಯವಾದ ಪ್ರತಿಮೆಯನ್ನು ಮನೆಯಲ್ಲಿ ಪೂಜಿಸಬಾರದು ಎಂದು ಸಂಪ್ರದಾಯಜ್ಞರು ಹೇಳುತ್ತಾರೆ.

96 ಅಂಗುಲಗಳ ವಿಭಾಗವನ್ನು ಆಚಾರ್ಯರು ವಿಸ್ತಾರವಾಗಿ ಒಂದೋಂದು ಅವಯವಕ್ಕೆ ಎಷ್ಟು ಅಂಗುಲಗಳಿರಬೇಕು ಎಂದು 30ಶ್ಲೋಕಗಳಿಂದ ತೃತೀಯಾಧ್ಯಾಯದಲ್ಲಿ ನಿರೂಪಿಸಿದ್ದಾರೆ.

**ಶಿಲಾಪರೀಕ್ಷಣ**

**ಪ್ರತಿಮಾರ್ಥಂ ವ್ರಜನ್ ಪಂಚ ಧ್ವನಿಭಿರ್ಮಂಗಲ್ಯೈರ್ಯುತಃ ।**
**ಗತ್ವಾ ಶುಚಿಸ್ಥಲಂ ತತ್ರ ಶಿಲಾಂ ಚೈವ ಪರೀಕ್ಷಯೇತ್ ॥**
**ಧ್ವನಿಭೇದೇನ ವಿಜ್ಞಾಯ ಶಿಲಾಂ ಗರ್ಭವತೀಂ ತ್ಯಜೇತ್ ॥ (ತಂ.ಸಾ. 44)**

ಪ್ರತಿಮಾನಿರ್ಮಾಣಕ್ಕಾಗಿ ಪ್ರವೃತ್ತನಾದ ವ್ಯಕ್ತಿಯು ಮಾಂಗಳಿಕವಾದ ದ್ರವ್ಯಗಳಿಂದ ಮತ್ತು ಐದು ವಿಧವಾದ ಧ್ವನಿಗಳಿಂದ ಕೂಡಿ ಯೋಗ್ಯವಾದ ಸ್ಥಳಕ್ಕೆ ಹೋಗಿ ಶಿಲೆಯನ್ನು ಧ್ವನಿಭೇದಿಂದ ಪರೀಕ್ಷಿಸಬೇಕು. ಗರ್ಭವತಿಯಾದ ಶಿಲೆಯನ್ನು ಸ್ವೀಕರಿಸಬಾರದು.

**ಪಂಚಧ್ವನಿಗಳು-** 1) ಕೋಲಿನಿಂದ ಹೊಡೆಯುವ ನಗಾರಿ 2) ಕೈಯಿಂದ ಬಾರಿಸುವ ಮೃದಂಗ 3) ಮುಖದ ಸಂಬಂಧದಿಂದ ಧ್ವನಿಮಾಡುವ ಕೊಳಲು 4) ಉಗುರಿನಿಂದ ಧ್ವನಿಮಾಡುವಂತಹ ವೀಣಾದಿಗಳು 5) ಪರಸ್ಪರಸಂಬಂಧದಿಂದ ಧ್ವನಿಮಾಡುವ ತಾಳಮುಂತಾದವುಗಳು. ಈ ಐದು ಧ್ವನಿಗಳಿಂದ ಕೂಡಿ ಶಿಲಾಪರೀಕ್ಷೆಗೆ ಹೋಗಬೇಕು.

**ಮಂಗಳದ್ರವ್ಯಗಳು**

**ಸುವರ್ಣಂ ರಜತಂ ದೂರ್ವಾ ಹರಿದ್ರಾ ಮಧುಸರ್ಪಿಷೀ ।**
**ಅಕ್ಷತಾಃ ಸರ್ಷಪಾಶ್ಚೈವ ಮಂಗಲಾಃ ಪರಿಕೀರ್ತಿತಾಃ ॥**

ಬಂಗಾರ ಬೆಳ್ಳಿ, ಗರಿಕೆ, ಅರಿಶಿನ, ಜೇನುತುಪ್ಪ, ಹಸುವಿನ ತುಪ್ಪ, ಅಕ್ಷತೆ, ಬಿಳಿಸಾಸಿವೆ ಇವುಗಳು ಮಂಗಳ ದ್ರವ್ಯಗಳು. ಈ ಮಂಗಳದ್ರವ್ಯದಿಂದಲೂ ಸಹಿತನಾಗಿ ಶಿಲೆಯನ್ನು ಪರೀಕ್ಷಿಸಲು ತೆರಳಬೇಕು.

**ಗರ್ಭವತೀಶಿಲೆ**

**ಧ್ವನಿಶ್ಚ ಶಿಥಿಲಾ ಯಾಸು ಸ್ಪರ್ಶ ಉಷ್ಣಸ್ತಥಾಽಪಿ ವಾ ।**
**ತಾಸು ಗರ್ಭಾಃ ಸ್ಫುಟಂ ಸಂತಿ ಯತ್ನೇನೋತ್ಪಾಟಯೇತ್ತು ತಾಃ ॥**

ಯಾವ ಶಿಲೆಯಲ್ಲಿ ಶಿಥಿಲವಾದ ಧ್ವನಿ ಮತ್ತು ಉಷ್ಣಸ್ಪರ್ಶವು ಇರುತ್ತದೋ ಆ ಶಿಲೆಗಳು ಗರ್ಭವತಿ ಶಿಲಾ ಎಂದೆನಿಸುತ್ತವೆ. ಆ ಶಿಲೆಯನ್ನು ಸ್ವೀಕರಿಸಬಾರದು. ಶಿಲೆಯ ಮಧ್ಯದಲ್ಲಿ ಕಪ್ಪೆಮುಂತಾದ ಪ್ರಾಣಿಗಳು ಇದ್ದರೆ ಅವುಗಳನ್ನೂ ಸಹ ಗರ್ಭ ಎಂದು ಹೇಳುವರು. 'ಗರ್ಭವತ್ಯಃ ಶಿಲಾ ವರ್ಜ್ಯಾಃ ಗರ್ಭಾಶ್ಚಾಂತರವಸ್ಥಿತಾಃ' ಎಂದು. ಅಂತಹ ಗರ್ಭವತಿ ಶಿಲೆಯನ್ನು ಸ್ವೀಕರಿಸಬಾರದು.

ಶಿಲಾಪರೀಕ್ಷಾಕ್ರಮಕ್ಕೆ ವಿಷ್ಣುತೀರ್ಥೀಯದಲ್ಲಿ ಮತ್ತು ಪಂಚರಾತ್ರದಲ್ಲಿ ಹೇಳಿದಂತೆ ಅನೇಕ ಪ್ರಕಾರಗಳು ಉಂಟು ಎಂದು ವೆಂಕಟಪತ್ಯಾಚಾರ್ಯರು ವಿವರಿಸಿರುವರು.

ದಾರುಮಯವಾದ ಪ್ರತಿಮೆಯನ್ನು ಮಾಡುವದಿದ್ದರೆ **'ವಾರ್ಕ್ಷೀ ಚೇತ್ ಯಜ್ಞವೃಕ್ಷಸ್ಯ ಸಾರೇಣೈವ ತು ಕಾರಯೇತ್'** (ತಂ.ಸಾ,3-46) ಎಂಬ ವಾಕ್ಯದಂತೆ ಯಜ್ಞಸಾಧನವಾದ ದೇವದಾರು, ಶಮೀ, ಬಿಲ್ವ (ಬೆಲ್ಲವತ್ತ) ಮಧುಕ, (ಇಪ್ಪೆ) ಖದಿರ (ಕಗ್ಗಲಿಮರ) ರಾಜವೃಕ್ಷ (ಕಕ್ಕೆಯ ಮರ) ಚಂದನ, ಅಶ್ವತ್ಥ ಮರಗಳಿಂದ ಪ್ರತಿಮೆಯನ್ನು ಮಾಡಬೇಕು.

ವೃಕ್ಷಭೇದದಿಂದ ಫಲಭೇದವನ್ನೂ ಸಹ ಹೇಳಿರುವರು-

**ದ್ರುಮಜಾತಿಃ ಪ್ರತಿಕೃತಿಃ ಸಾ ಪೂಜ್ಯಾ ಕಾಮಿನಾಂ ಭವೇತ್ ।**
**ಪ್ರತಿಮಾ ಚಂದನಮಯೀ ಪೂಜಿತಾ ಶ್ರಿಯಮಾವಹೇತ್ ॥**

**ಪ್ರತಿಮಾ ಚಾಗರುಮಯೀ ಭುಕ್ತಿಮುಕ್ತಿಫಲಪ್ರದಾ ।**
**ಬ್ರಹ್ಮವರ್ಚಸಕಾಮೇನ ಬ್ರಹ್ಮವೃಕ್ಷಸಮುದ್ಭವಾ ॥**

**ಶಮೀಪ್ರತಿಕೃತಿಃ ಸ್ವರ್ಗಂ ನಯೇತ್ ಸತ್ಪುರುಷಂ ಯಥಾ ।**
**ಅನ್ನಾದ್ಯಕಾಮೈಃ ಪ್ರತಿಮಾ ಪೂಜ್ಯೋದಂಬರದಾರುಜಾ ॥**

**ಅಶ್ವತ್ಥನಿರ್ಮಿತಾ ಪೂಜ್ಯಾ ರಾಜ್ಯಕಾಮೇನ ಧಾಮನಿ ।**
**ನ್ಯಗ್ರೋಧನಿರ್ಮಿತಂ ಬಿಂಬಂ ವಂಶವಿಚ್ಛೇದಕಾರಣಮ್ ॥** ಎಂದು.

ಪುಂಶಿಲೆಯಿಂದ ಪ್ರತಿಮೆಯನ್ನು ನಿರ್ಮಿಸಬೇಕು. ಸ್ತ್ರೀಶಿಲೆಯಿಂದ ಪೀಠವನ್ನು ನಿರ್ಮಿಸಬೇಕು.

ನಪುಂಸಕ ಶಿಲೆಯಿಂದ ಪಿಂಡಿಕೆಯನ್ನು ಮಾಡಬೇಕು. (ಪೀಠದ ಕೆಳಗಿರುವ ಶಿಲೆಯನ್ನು ಪಿಂಡಿಕಾ ಎಂದು ಕರೆಯುವರು.)

**ಪ್ರತಿಮಾದ್ಯುಪಯುಕ್ತಶಿಲಾಪರೀಕ್ಷಾಕ್ರಮ**

> **ಪುಲ್ಲಿಂಗಾ ಬ್ರುವತೇ ನಾದಂ ಕಾಂಸ್ಯಘಂಟಾನಿನಾದವತ್ ।**
> **ಮೂಲೇ ಮಧ್ಯೇ ತಥಾಽಗ್ರೇ ಚ ಜ್ಞೇಯಾ ಸಾ ಪುಂಶಿಲಾ ಬುಧೈಃ ॥**
>
> **ತದೇತಲ್ಲಕ್ಷಣಂ ಯತ್ರ ಮಂದಂ ಮಂದಂ ಪ್ರದೃಶ್ಯತೇ ।**
> **ಸ್ತ್ರೀಲಿಂಗೇತಿ ಸ್ಮೃತಾ ಸಾ ಚ ಭಿನ್ನಕಾಂಸ್ಯಧ್ವನಿಸ್ತು ಯಾ ॥**
> **ನಪುಂಸಕೇತಿ ಸಾ ಖ್ಯಾತಾ ನ ಯತ್ರೈತದ್ವಯಂ ಭವೇತ್ ॥ (ವಿಷ್ಣುತೀರ್ಥೀಯ)**

ಕಂಚಿನ ಘಂಟೆಯಂತೆ ಸ್ಥೂಲವಾದ ಧ್ವನಿಯುಳ್ಳ ಶಿಲೆಯು ಪುಂಶಿಲೆ. ಭಿನ್ನವಾದ ಘಂಟೆಯ ಧ್ವನಿಯಂತೆ ಸೂಕ್ಷ್ಮವಾದ ಧ್ವನಿಯುಳ್ಳ ಶಿಲೆಯು ಸ್ತ್ರೀಶಿಲೆ. ಪೂರ್ವೋಕ್ತನಾದದ್ವಯಗಳಿಂದ ವಿಲಕ್ಷಣವಾದ ಸಮವಾದ ಸ್ವರವುಳ್ಳ ಶಿಲೆಯು ನಪುಂಸಕ ಶಿಲೆ. ಈ ವಿಧವಾದ ಯೋಗ್ಯವಾದ ಶಿಲೆಗಳಿಂದ ಪ್ರತಿಮಾದಿಗಳನ್ನು ನಿರ್ಮಿಸಿ ತಂತ್ರಸಾರೋಕ್ತವಾದ ಕ್ರಮದಿಂದ ದೇವಾಲಯವನ್ನು ನಿರ್ಮಿಸಿ ಪ್ರತಿಮೆಯನ್ನು ಪ್ರತಿಷ್ಠಾಪಿಸಬೇಕು.

**ವಾಸ್ತುಪುರುಷ**

**'ಪೂಜಯೇತ್ ವಾಸ್ತುಪುರುಷಸ್ಯೋಪರಿಸ್ಥಾಂಸ್ತು ಸರ್ವದಾ । ದೇವಾನ್ ಬ್ರಹ್ಮಾದಿಕಾನ್.....।** (ತಂ.ಸಾ. 3-71) ಎಂದು ಹೇಳಿದಂತೆ ವಾಸ್ತುಪುರುಷಮಂಡಲದಲ್ಲಿ ಬ್ರಹ್ಮಾದಿದೇವತೆಗಳನ್ನು ಮತ್ತು ವಾಸ್ತುಪುರುಷನನ್ನು ಪೂಜಿಸಬೇಕು. ಆಚಾರ್ಯರು 'ಸರ್ವದಾ' ಎಂದು ಹೇಳಿರುವದರಿಂದ ಕೇವಲ ಪ್ರತಿಮೆಪ್ರತಿಷ್ಠಾಕಾಲದಲ್ಲಿ ಮಾತ್ರ ವಾಸ್ತು ಪುರುಷನ ಪೂಜೆಯು ಮಾಡುವದಲ್ಲ ಕಿಂತು ನೂತನಗೃಹಪ್ರವೇಶ, ಕೂಪತಟಾಕಾದಿಗಳನ್ನು ನಿರ್ಮಿಸಿದಾಗಲೂ ವಾಸ್ತುಪೂಜೆಯನ್ನು ಅವಶ್ಯವಾಗಿ ಮಾಡಲೇ ಬೇಕು ಎಂದು ತಿಳಿಯುತ್ತದೆ. ಪ್ರತಿವರ್ಷದಲ್ಲಿಯೂ ಸಹ ವಾಸ್ತುಪುರುಷನನ್ನು ಪೂಜಿಸುವ ಕ್ರಮವೂ ಉಂಟು. ಇದರಿಂದ ವಿಘ್ನಗಳು ದೂರವಾಗಿ ಸಕಲಮನೋಭೀಷ್ಟಗಳು ಫಲಿಸುತ್ತವೆ ಎಂದು ಕಾಪಿಲೇಯದಲ್ಲಿ ಹೇಳಿದೆ.

> ಸರ್ವಾನ್ ದೇವಾಂಸ್ತು ಕಾರ್ಯೇಷು ಪೂಜಯೇದ್ವಾಸ್ತುಸಂಸ್ಥಿತಾನ್ ।
> ತೇನಾಸೌ ವರ್ತತೇ ನೋಚೇತ್ ಉತ್ತಿಷ್ಠೇನ್ಮಾಧವಾಜ್ಞಯಾ ॥
>
> ತತಶ್ಚ ತೇಷಾಂ ಯೇ ಪೂಜಾವಿಮುಖಾಸ್ತೈಃ ಕೃತಾನಿ ತು ।
> ಸುಕೃತಾನಿ ಸಮಾದದ್ಯುಃ ದುಷ್ಕೃತಾನಿ ಚ ಕುರ್ವತೇ ॥
>
> ತತಸ್ತೇಷಾಮರ್ಚನಂ ತು ಪ್ರತ್ಯಬ್ದಂ ಕುರ್ವತಾಂ ಸತಾಮ್ ।
> ಶುಭಾನ್ಯೇವಾಶು ಜಾಯಂತೆ ನೈವಾಶುಭಕಥಾಽಪಿ ವಾ ॥

ಈ ವಾಸ್ತುಪುರುಷನ ಕಥೆಯನ್ನು ಮತ್ತು ಮಂಡಲದಲ್ಲಿ ಪೂಜ್ಯದೇವತೆಗಳನ್ನು ಶೈವಾದಿತಂತ್ರಗಳಲ್ಲಿ ಅನೇಕವಿಧವಾಗಿ ಹೇಳಿದೆ. ಶೈವತಂತ್ರಪದ್ಧತಿಯಂತೆ ಆತ ರುದ್ರನ ಮಗ.

ಸಂಗ್ರಾಮೇಽಂಧಕರುದ್ರಯೋಶ್ಚ ಪತಿತಃ ಸ್ವೇದೋ ಮಹೇಶಾತ್ ಕ್ಷಿತೌ
ತಸ್ಮಾದ್ಭೂತಮಭೂಚ್ಚ ಭೀತಿಜನನಂ ದ್ಯಾವಾಪೃಥಿವ್ಯೋರ್ಮಹತ್ ।
ತದ್ದೇವೈಃ ಸಹಸಾ ನಿಗೃಹ್ಯ ನಿಹಿತಂ ಭೂಮಾವಧೋವಕ್ತ್ರಕಂ
ದೇವಾನಾಂ ವಚನಾಚ್ಚ ವಾಸ್ತುಪುರುಷಸ್ತೇನೈವ ಪೂಜ್ಯೋ ಬುಧೈಃ ॥

ರುದ್ರದೇವರು ಅಂಧಕಾಸುರನೊಡನೆ ಯುದ್ಧ ಮಾಡುವಾಗ ರುದ್ರದೇವರ ದೇಹದಿಂದ ಒಂದು ಹನಿ ಬೆವರು ಬಿದ್ದಿತು. ತಕ್ಷಣದಲ್ಲಿ ಆ ಬೆವರಿನ ಹನಿಯು ಭೂತಾಕಾರವಾಗಿ ಜಗತ್ತನ್ನು ನುಂಗುವ ವಾಸ್ತುಪುರುಷನ ರೂಪವನ್ನು ತಾಳಿತು. ಜಗತ್ತನ್ನು ಪೀಡಿಸಲು ಆರಂಭಿಸಿತು. ಅದನ್ನು ದೇವತೆಗಳು ಭೂಮಿಯಲ್ಲಿ ಒತ್ತಿಟ್ಟರು. ಆಗ ಅದು ಚೌಕಾಕಾರವಾಗಿ ಬಿದ್ದುಕೊಂಡಿತು. ಎಲ್ಲ ದೇವತೆಗಳು ಪ್ರಾಸಾದಾದಿಗಳನ್ನು ನಿರ್ಮಿಸುವಾಗ ವಾಸ್ತುಪುರುಷನನ್ನು ಪೂಜಿಸಬೇಕು ಎಂದು ವರವನ್ನಿತ್ತರು. ದೇವತೆಗಳ ವರದಿಂದ ಆ ವಾಸ್ತುಪುರುಷನು ಜಗತ್ತಿನಲ್ಲಿ ಪೂಜ್ಯನಾದನು. ಇದು ಶೈವತಂತ್ರಗಳಿಂದ ತಿಳಿದು ಬರುವ ಕಥೆ.

ಇನ್ನು ಕೆಲವು ಶೈವಗ್ರಂಥಗಳಲ್ಲಿ ಇಂದ್ರನ ಕ್ರೋಧದಿಂದ ಉತ್ಪನ್ನನಾದವನು ಯಜ್ಞವನ್ನು ಅಪಹರಿಸುವವನು ವಾಸ್ತುಪುರುಷ ಎಂದು ಹೇಳಿದೆ.

ಶಕ್ರಕ್ರೋಧಾತ್ ಸಮುತ್ಪನ್ನೋ ವಾಸ್ತುರ್ಯಜ್ಞಾಪಹಾರಕಃ ।

ಪದಾರ್ಥದರ್ಶನ ಎಂಬ ಗ್ರಂಥದಲ್ಲಿ ಭಿನ್ನವಾಗಿ ವಾಸ್ತುಪುರುಷನ ಉತ್ಪತ್ತಿಯನ್ನು ಹೇಳಿದ್ದಾರೆ. ಕಾಶ್ಯಪರ ಪತ್ನಿ ಸಿಂಹಿಕಾ ಎಂದು. ಸಿಂಹಿಕೆಯು ರಾಹು ಹಾಗು ವಾಸ್ತುಪುರುಷನನ್ನು ಹೇತ್ತಳು. ಈ ವಾಸ್ತುವನ್ನು ದೇವತೆಗಳು ಭೂಮಿಯಲ್ಲಿ ಬೀಳಿಸಿದರು ಎಂದು.

ಈ ವಾಸ್ತುವಿನ ಸ್ವರೂಪವನ್ನು ಹಾಗೂ ಉತ್ಪತ್ತಿಯನ್ನು ಆಚಾರ್ಯರು ವೈಷ್ಣವತಂತ್ರಗಳಿಗೆ ಅನುಗುಣವಾಗಿ ತಂತ್ರಸಾರಸಂಗ್ರಹದಲ್ಲಿ ನಿರೂಪಿಸಿದ್ದಾರೆ.

................ವಾರಾಹಸ್ಯ ಹರೇಃ ಸುತಃ ।
ಪತಿತೋ ದೇವತೈರ್ಭೂಮೌ ಚತುರಸ್ರಾಕೃತಿಃ ಸ್ಥಿತಃ ॥

ವರಾಹರೂಪಿಯಾದ ಶ್ರೀಹರಿಯಿಂದ ಉತ್ಪನ್ನನಾದವನು ವಾಸ್ತುಪುರುಷ. ದೇವತಾಸಾಮ್ಯವನ್ನು ಅಪೇಕ್ಷಿಸಿದಾಗ ದೇವತೆಗಳು ಅವನನ್ನು ಭೂಮಿಯಲ್ಲಿ ಬೀಳಿಸಿದರು. ಅವನು ಚೌಕಾಕಾರವಾಗಿ ಭೂಮಿಯಲ್ಲಿ ಬಿದ್ದನು ಎಂದು ಆಚಾರ್ಯರು ವಿವರಿಸಿದ್ದಾರೆ. ರಘುನಾಥತೀರ್ಥರು ಈ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸುತ್ತಾರೆ.

ವಾಸ್ತುರ್ನಾಮಾ ಚತುರ್ವಕ್ತ್ರೋ ಭಗವತ್ಸ್ವೇದಸಂಭವಃ ।
ಅಭ್ಯದ್ರವತ್ ಸುರಾನ್ ಹಂತುಮಾತ್ಮನೋ ಬಲದರ್ಪಿತಃ ॥

ಸ ದೇವತೈಸ್ತೂರ್ಣಮಪತದ್ಭುವಿ ವಿಹ್ವಲಃ ।
ವ್ಯಸ್ತಸ್ತಾಂಗಸ್ಯ ಚ ಪ್ರಾಣಾನ್ ಧಾರಯೇದಿಹ ವಾಸ್ತುಕಃ ॥ ಎಂದು.

ಈ ಪ್ರಮಾಣದಲ್ಲಿ ವಾಸ್ತುವು ಭಗವಂತನ ಬೆವರಿನಿಂದ ಉತ್ಪನ್ನವಾದವನು ಎಂದು ಹೇಳಿದೆ. ಅವನಿಗೆ ನಾಕು ಮುಖಗಳು.

ಗುರ್ವರ್ಥದೀಧಿತಿಕಾರರು ಸಹ ಪ್ರಮಾಣಾಂತರವನ್ನು ಉದಾಹರಿಸಿ ಅವನ ಲಯವನ್ನೂ ಸಹ ಹೇಳಿರುವರು.

ಪೂರ್ವಮಾಸೀನ್ಮಹಾನುಗ್ರಃ ಸರ್ವಭೂತಭಯಂಕರಃ ।
ಸ ದೇವೈರ್ನಿಹಿತೋ ಭೂಮೌ ಸ ವಾಸ್ತುಪುರುಷಃ ಸ್ಮೃತಃ ॥

ಯಾವದ್ಭೂಮಿಃ ಸ್ಥಿರಾ ಲೋಕೇ ತಾವದ್ವಾಸ್ತ್ವಸುರಃ ಸ್ಮೃತಃ ।
ಸಂಹಾರೇ ತು ಲಯಂ ಯಾತಿ ದೇವೈಃ ಸರ್ವಗ್ರಹಾದಿಭಿಃ ॥

ವಿಸ್ತಾರೋಽಸ್ಯ ಸಮಂತಾಚ್ಚ ಶತಕೋಟಿಸುಯೋಜನಃ ।
ಸಂಸ್ಥಿತೋಽಸೌ ಧರಾಂ ವ್ಯಾಪ್ಯ ಪ್ರೋನ್ನತಃ ಕೃಷ್ಣವರ್ಣಕಃ ॥ ಎಂದು.

ಸರ್ವಪ್ರಾಣಿಗಳಿಗೂ ಭಯಂಕರನಾದ ಉಗ್ರನಾದ ವಾಸ್ತುವು ಇದ್ದನು. ಇವನು ಅಸುರ. ಅವನನ್ನು ದೇವತೆಗಳು ಭೂಮಿಯಲ್ಲಿ ಬೀಳಿಸಿದರು. ಎಲ್ಲಿಯ ವರೆಗು ಭೂಮಿಯು ಸ್ಥಿರವಾಗಿರುತ್ತದೋ ಅಲ್ಲಿಯ ವರೆಗೂ ಸಹ ವಾಸ್ತ್ವಸುರನು ಇರುವನು. ಸಂಹಾರಕಾಲದಲ್ಲಿ ಎಲ್ಲ ದೇವತೆಗಳೊಡನೆ ಗ್ರಹಗಳೊಡನೆ ಲಯವನ್ನು ಹೊಂದುವನು. ಸುತ್ತಲೂ ನೂರುಕೋಟಿ ವಿಸ್ತೀರ್ಣನಾಗಿರುವನು. ಕಪ್ಪುಬಣ್ಣದವನಾಗಿ ಇಡೀ ಭೂಮಿಯನ್ನು ವ್ಯಾಪಿಸಿರುವನು. ಈ ವಾಸ್ತುವನ್ನು ನೂತನಗೃಹ ನಿರ್ಮಾಣಾದಿಕಾರ್ಯಗಳಲ್ಲಿ ಪೂಜಿಸಿ ಆ ವಾಸ್ತುಪುರುಷನ ಮೇಲೆ ಬ್ರಹ್ಮಾದಿದೇವತೆಗಳನ್ನು ಪೂಜಿಸಬೇಕು.

ಅಸುರನಾದ ವಾಸ್ತುವಿನ ಪೂಜೆಯು ಅಯುಕ್ತ ಎಂದು ಶಂಕಿಸಿ ಶ್ರೀರಘುನಾಥತೀರ್ಥರು ಸಮಾಧಾನವನ್ನು ಹೇಳಿರುವರು.

ಭೂತಾಃ ಪಿಶಾಚಾ ನಾಗಾಶ್ಚ ಅಸುರಾ ರಾಕ್ಷಸಾ ಗ್ರಹಾಃ ।
ಸರ್ವೇ ತು ವ್ಯಪಗಚ್ಛಂತು ಬಲಿತುಷ್ಟಾ ಯಥಾಯಥಮ್ ॥

ಭೂತಾನಾಂ ಚ ಪಿಶಾಚಾನಾಂ ರಕ್ಷಸಾಂ ದಿತಿಜನ್ಮನಾಮ್ ।
ಗ್ರಹಾಣಾಮಪಿ ನಾಗಾನಾಂ ಅನ್ಯೇಷಾಂ ಚ ಬಲಿಂ ಕ್ಷಿಪೇತ್ ॥

ಭೂತ, ಪಿಶಾಚ, ಸರ್ಪಗಳು, ಅಸುರರು, ರಾಕ್ಷಸರು, ಗ್ರಹಗಳು, ಬಲಿಯಿಂದ ಸಂತುಷ್ಟರಾಗಿ ದೂರಸರಿಯಲಿ. ಭೂತ,ಪಿಶಾಚ ರಾಕ್ಷಸ ಗ್ರಹಮುಂತಾದವುಗಳಿಗೆ ಬಲಿಯನ್ನು ಇಡಬೇಕು ಎಂದು ಪ್ರಮಾಣದಲ್ಲಿ ಹೇಳಿರುವದರಿಂದ ಇಲ್ಲಿ ಅಸುರನಾದ ವಾಸ್ತುವಿಗೆ ಕೇವಲ ಬಲಿಯಿಂದ ಪೂಜೆಯನ್ನು ಮಾಡಬಹುದು. ಕೇವಲ ಬಲಿದಾನದಿಂದ ಅವನು ಸಂತುಷ್ಟನಾಗಿ ವಿಘ್ನಗಳನ್ನು ಉಂಟು ಮಾಡುವುದಿಲ್ಲ. ಆದ್ದರಿಂದಲೆ ಆಚಾರ್ಯರು 'ಉಪರಿಸ್ತಾನ್ ತು' ಎಂದು 'ತು'ಶಬ್ದದಿಂದ ಕೇವಲ ಬಲಿದಾನದಿಂದ ಪೂಜೆಯನ್ನು ವಿಧಿಸಿದ್ದಾರೆ. ಸಾಕ್ಷಾತ್ತಾಗಿ ಹೇಳಿಲ್ಲ.

ಸಾತ್ವಿಕರಾಜಸಾದಿ ವಿಭಾಗಗಳು ಪುರಾಣಗಳಲ್ಲಿರುವಂತೆ ತಂತ್ರಗಳಲ್ಲಿಯೂ ಸಹ ಸಾತ್ವಿಕಾದಿ ವಿಭಾಗಗಳು ಇರುವದರಿಂದ ಸಜ್ಜನರು ನಾನಾ ತೆರನಾದ ಕಥೆಗಳಿಂದ ಗಲಿಬಿಲಿಗೊಳ್ಳದಲೆ ಆಚಾರ್ಯರು ಹೇಳಿರುವ ವೈಷ್ಣವತಂತ್ರಗಳಿಗನುಗುಣವಾದ ವಾಸ್ತುವಿನ ಸ್ವರೂಪವನ್ನು ತಿಳಿದು ಪೂಜಿಸಬೇಕು.

## ಪ್ರತಿಮೆಯಲ್ಲಿ ಅನುಸಂಧಾನ

ವೈಷ್ಣವತಂತ್ರೋಕ್ತಕ್ರಮದಿಂದ ವಾಸ್ತುಪುರುಷನ ಪೂಜಾದಿಗಳನ್ನು ಮಾಡಿ ಪ್ರತಿಷ್ಠಾಂಗವಾದ ಅಧಿವಾಸಾದಿಗಳನ್ನು ಸಮಾಪಿಸಿ ವಿಹಿತವಾದ ಹೋಮಾದಿಗಳನ್ನು ಕಲಶಸ್ಥಾಪನೆಯನ್ನು ಮಾಡಿ ಪ್ರತಿಮೆಯನ್ನು ಪ್ರತಿಷ್ಠಾಪಿಸಬೇಕು. ಪ್ರತಿಷ್ಠಾಪಿಸುವಾಗ ಆಚಾರ್ಯರು ಕೆಲವು ಅನುಸಂಧಾನ ಗಳನ್ನು ಸುಂದರವಾಗಿ ನಿರೂಪಿಸಿರುವರು.

**................ಧ್ಯಾಯೇತ್ತೇಜೋಮಯೀಂ ಪುನಃ ।**
**ಪ್ರತಿಮಾಂ ಪ್ರತಿಮಾಂತಸ್ಥಾಂ ತನ್ಮಧ್ಯೇ ಪರಮಂ ವಪುಃ ॥**
**ಚಿದಾನಂದರಸಂ ಸರ್ವಗುಣಸಂಪೂರ್ಣಮುತ್ತಮಮ್ ॥** (ತಂ.ಸಾ. 3-114)

ಮಂತ್ರಜ್ಞಾನಿಯಾದವನು ಪ್ರತಿಮೆಯನ್ನು ಮುಟ್ಟಿ ಅಷ್ಟಾಕ್ಷರಮಂತ್ರವನ್ನು ಪ್ರತಿಷ್ಠೇಯ ದೇವತಾಮಂತ್ರವನ್ನು 108ಬಾರಿ ಜಪಿಸುತ್ತ ಪ್ರತಿಮೆಯ ಒಳಗೆ ತೇಜೋಮಯವಾದ ಒಂದು ಪ್ರತಿಮೆಯನ್ನು ಚಿಂತಿಸಿ ಮತ್ತು ಅದರ ಮಧ್ಯದಲ್ಲಿ ಜ್ಞಾನಾನಂದಘನನಾದ ಸರ್ವಗುಣಸಂಪೂರ್ಣ ನಾದ ಸರ್ವೋತ್ತಮನಾದ ಶ್ರೀಹರಿಯನ್ನು ಚಿಂತಿಸಬೇಕು.

ಪ್ರತಿಮೆಯ ಮಧ್ಯದಲ್ಲಿ ತೇಜೋಮಯವಾದ ಪ್ರತಿಮೆ ಎಂದರೆ ವಾಯು ಅಥವಾ ಲಕ್ಷ್ಮೀದೇವಿ. ಅವರನ್ನು ಪ್ರತಿಮೆಯಲ್ಲಿ ಚಿಂತಿಸಿ ಅವರಲ್ಲಿ ಗುಣಪೂರ್ಣನಾದ ಭಗವಂತವನ್ನು ಚಿಂತಿಸಬೇಕು ಎಂದು ಎಂದು ಛಲಾರಿ ಆಚಾರ್ಯರು ಸಂಪ್ರದಾಯವನ್ನು ತಿಳಿಸುತ್ತಾರೆ. ಶ್ರೀರಘುನಾಥತೀರ್ಥರ ಅಭಿಪ್ರಾಯವೂ ಸಹ ಇದೇ ವಿಧವಾಗಿದೆ. ಸಮ್ಮತಿಯಾಗಿ ಛಲಾರಿ ಆಚಾರ್ಯರು ಛಾಂದೋಗ್ಯಭಾಷ್ಯದ ವಚನವನ್ನು ಉದಾಹರಿಸುತ್ತಾರೆ.

**ಪ್ರತಿಮಾಂ ಪ್ರತಿಮಾಂತಸ್ಥಾಂ ವಾಯೋಸ್ತೇಜೋಮಯೀಂ ಸುಧೀಃ ।**
**ವಿಷ್ಣೋರ್ವಪುಶ್ಚ ತನ್ಮಧ್ಯೇ ಧ್ಯಾಯೇದಾನಾಂದಚಿದ್ಘನಮ್ ॥**

**ವಿನಾ ಪ್ರತೀಕಂ ಪ್ರಾಣಸ್ಯ ಸ್ಮರನ್ನಿರಯಭಾಗ್ಭವೇತ್ ।**
**ವಾಯಂ ವಿನಾ ನ ಗೃಹ್ಣಾಮಿ ಯತ್ ಕಿಂಚಿತ್ ವಸ್ತು ಮೇ ಪ್ರಿಯಮ್ ।**
**ತಸ್ಮಾದ್ವಾಯುಮುಖೈರ್ದೇವೈರ್ವಾಯುಹಸ್ತೇನ ದಾಪಯೇತ್ ॥** (ಛಾಂ. ಭಾ. 1-2-7)
**ಪ್ರತಿಮಾಽಧಿಕಸಾದೃಶ್ಯಾನ್ಮುಖ್ಯಾ ವಿಷ್ಣೋಃ ಸದಾ ರಮಾ ।**

## ಅನ್ಯದೇವತಾಪ್ರತಿಷ್ಠಾಪನೆಯಲ್ಲಿ ಅನುಸಂಧಾನ

**ದುರ್ಗಾಶಿವಸ್ಕಂದಸೂರ್ಯವಿನಾಯಕಮುಖಾನಪಿ ।**
**ಸ್ಥಾಪಯೇದುಕ್ತಮಾರ್ಗೇಣ ತತ್ತನ್ಮಂತ್ರೈಃ ಸ್ಮರನ್ ಹರಿಮ್ ॥**

**ಗೋಲಕದ್ವಿತಯಂ ವಿಷ್ಣೋಸ್ತ್ರಿತಯಂ ವಾ ಪ್ರಕೀರ್ತಿತಮ್ ।**
**ಅನ್ಯದೇವಪ್ರತಿಷ್ಠಾಸು ತದಂತಶ್ಚಿಂತಯೇದ್ಧರಿಮ್ ॥ (ತಂ.ಸಾ. 3-141,142)**

ದುರ್ಗಾ, ಶಿವ, ಸ್ಕಂದ, ಸೂರ್ಯ, ಗಣಪತಿ ಇಂದ್ರ, ಶೇಷ, ಗರುಡ, ವಿಶ್ವಕ್ಸೇನ ಮುಂತಾದವರ ಪ್ರತಿಷ್ಠೆಯನ್ನು ಸಹ ವಿಷ್ಣುಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗ ಹೇಳಿದ ಅಧಿವಾಸಾದಿಗಳನ್ನು ಮಾಡಿ ಪ್ರತಿಷ್ಠಾಪಿಸಬೇಕು. ಪ್ರತಿಷ್ಠಾಪಿಸುವಾಗ ಭಗಂತನ ಎರಡು ಅಥವಾ ಮೂರು ಗೋಲಕವನ್ನು ಚಿಂತಿಸಿ ಅದರಲ್ಲಿ ಭಗವಂತನನ್ನು ಚಿಂತಿಸಿ ಪ್ರತಿಷ್ಠಾಪಿಸಬೇಕು.

ಗೋಲಕ ಎಂದರೆ ಪ್ರತಿಮೆ. ಭಗವಂತನ ಪೂಜೆಗಾಗಿ ಇರುವ ಒಂದು ಸ್ಥಳ. ವಿಷ್ಣು ಪ್ರತಿಮೆ ಹಾಗು ಅನ್ಯದೇವತಗಳ ಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗ ಅವಶ್ಯಮಾಡಬೇಕಾದ ಅನುಸಂಧಾನವನ್ನು ಆಚಾರ್ಯರು ಇಲ್ಲಿ ತಿಳಿಸಿದ್ದಾರೆ. ಈ ಶ್ಲೋಕವನ್ನು ಮೂರು ನಾಲ್ಕು ರೀತಿಯಿಂದ ಛಲಾರಿ ಆಚಾರ್ಯರು ವ್ಯಾಖ್ಯಾನಿಸಿರುವರು.

1) ದುರ್ಗಾದಿದೇವತೆಗಳನ್ನು ಪ್ರತ್ಯೇಕವಾಗಿ ಆಯಾ ದೇವಾಲಯದಲ್ಲಿ ಅಥವಾ ವಿಷ್ಣುದೇವಾಲಯದಲ್ಲಿಯೇ ಆವರಣತ್ವೇನ ಪ್ರತಿಷ್ಠಾಪಿಸುವಾಗ ಆಯಾ ದೇವತಾಮಂತ್ರದಿಂದ ಪ್ರತಿಷ್ಠಾಪಿಸಿ ಅಲ್ಲಿ ಹರಿಯನ್ನು ಚಿಂತಿಸಬೇಕು. ವಿಷ್ಣುದೇವಾಲಯದಲ್ಲಿ ಆವರಣತ್ವೇನ ದುರ್ಗಾದಿ ಸರ್ವದೇವತೆಗಳನ್ನು ಪ್ರತಿಷ್ಠಾಪಿಸಲು ಶಕ್ತಿ ಇಲ್ಲದಿರುವಾಗ ಲಕ್ಷ್ಮೀ ಗರುಡರ ಪ್ರತಿಮೆಗಳನ್ನು (ಗೋಲಕದ್ವಿತಯಂ) ಪ್ರತಿಷ್ಠಾಪಿಸಬೇಕು. ಅಥವಾ ಲಕ್ಷ್ಮೀ ಗರುಡ ವಿಶ್ವಕ್ಸೇನರ ಪ್ರತಿಮೆಗಳನ್ನು (ಗೋಲಕತ್ರಿತಯಂ) ಪ್ರತಿಷ್ಠಾಪಿಸಬೇಕು.

2) ಅಥವಾ, ಅನ್ಯದೇವತೆಗಳನ್ನು ಪ್ರತಿಷ್ಠಾಪಿಸುವಾಗ ಶ್ರೀಹರಿಯನ್ನು ಪ್ರತಿಮಾಮಧ್ಯದಲ್ಲಿ ಚಿಂತಿಸುವ ಪ್ರಕಾರವನ್ನು 'ಗೋಲಕದ್ವಿತಯಂ...' ಎಂಬ ಶ್ಲೋಕದಿಂದ ಹೇಳಿರುವರು. 'ಗೋಲಕದ್ವಿತಯಂ...' ಎಂಬ ಶ್ಲೋಕದಲ್ಲಿರುವ 'ವಾ' ಶಬ್ದಕ್ಕೆ ಉಪಮಾ (ದೃಷ್ಟಾಂತ) ಎಂದು ಅರ್ಥ. ಹೇಗೆ ವಿಷ್ಣುವಿನ ಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗ ಮುಂದೆ ಕಾಣುವ ಪ್ರತಿಮೆಯು ಒಂದು. ಅದರ ಒಳಗೆ ತೇಜೋಮಯವಾದ (ಲಕ್ಷ್ಮೀ-ವಾಯು) ಪ್ರತಿಮೆಯ ಒಂದು ಹೀಗೆ ಎರಡು ವಿಷ್ಣುವಿನ ಪ್ರತಿಮೆಯನ್ನು ಚಿಂತಿಸುತ್ತೇವೆಯೋ ಹಾಗೆ ದುರ್ಗಾದಿ ಅನ್ಯದೇವತೆಗಳನ್ನು ಪ್ರತಿಷ್ಠಾಪಿಸುವಾಗ ಶ್ರೀಹರಿಯ ಮೂರು ಗೋಲಕವನ್ನು (ಪ್ರತಿಮೆಯನ್ನು) ಚಿಂತಿಸಬೇಕು. ಮುಂದೆ ಕಾಣುವ ಶಿವಾದಿ ಪ್ರತಿಮೆ ಒಂದು. ಅದರ ಒಳಗೆ ಪ್ರತಿಷ್ಠಾಪ್ಯವಾದ ಶಿವಾದಿಪ್ರತಿಮೆ ಎರಡು. ಶಿವಾದಿಚೇತನಪ್ರತಿಮೆಗಳಲ್ಲಿ ತೇಜೋಮಯವಾದ ಲಕ್ಷ್ಮೀ-ವಾಯುದೇವರ ಪ್ರತಿಮೆ ಮೂರು. ಹೀಗೆ ಭಗವಂತನ ಮೂರು ಪ್ರತಿಮೆಯನ್ನು ಚಿಂತಸಬೇಕು ಎಂದು ಅರ್ಥ.

3) ಅಥವಾ, ಶ್ಲೋಕದಲ್ಲಿರುವ 'ವಾ' ಶಬ್ದವು ವ್ಯವಸ್ಥಿತವಾದ ವಿಕಲ್ಪ ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾರೆ. ವಿಷ್ಣುಪ್ರತಿಮಾ ಮತ್ತು ಲಕ್ಷ್ಮೀ-ವಾಯು ಪ್ರತಿಮೆಯಲ್ಲಿ ಮುಂದೆ ಕಾಣುವ ಪ್ರತಿಮೆಯನ್ನು ವಿವಕ್ಷಿಸದೇ ವಿಷ್ಣುವಿನ ಎರಡು ಗೋಲಕವನ್ನು ಚಿಂತಿಸಬೇಕು. ಉಳಿದ ಶಿವಾದಿಪ್ರತಿಮೆಗಳಲ್ಲಿ ಪರಿದೃಶ್ಯಮಾನವಾದ ಪ್ರತಿಮೆಯನ್ನು ವಿವಕ್ಷಿಸದೇ ವಿಷ್ಣುವಿನ ಮೂರು ಗೋಲಕವನ್ನು ಚಿಂತಿಸಬೇಕು.

ವಿಷ್ಣುಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗ ಪ್ರತಿಮೆಯಲ್ಲಿ ತೇಜೋಮಯವಾದ ವಾಯು ಪ್ರತಿಮೆ. ವಾಯುಪ್ರತಿಮೆಯಲ್ಲಿ ತೇಜೋಮಯವಾದ ಲಕ್ಷ್ಮೀ ಪ್ರತಿಮೆ ಎಂದು ವಿಷ್ಣುವಿನ ಎರಡು ಪ್ರತಿಮೆಯನ್ನು ಚಿಂತಿಸಬೇಕು. ತೇಜೋಮಯವಾದ ಪ್ರತಿಮೆಯಲ್ಲಿ ವಿಷ್ಣುವನ್ನು ಚಿಂತಿಸಬೇಕು.

ಲಕ್ಷ್ಮೀಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗಲೂ ಸಹ ಆ ಪರಿದೃಶ್ಯಮಾನವಾದ ಪ್ರತಿಮೆಯಲ್ಲಿ ವಾಯುಪ್ರತಿಮೆ ಒಂದು. ಅದಲ್ಲಿ ಲಕ್ಷ್ಮೀ ಪ್ರತಿಮೆಯು ಎರಡನೇಯದ್ದು. ಅದರಲ್ಲಿ ಭಗವಂತನನ್ನು ಚಿಂತಿಸುವುದು ಎಂದು ಎರಡು ಭಗವತ್ಪ್ರತಿಮೆಯನ್ನು ಚಿಂತಿಸಬೇಕು.

ವಾಯು ಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗಲೂ ಸಹ ಪ್ರತಿಮೆಯಲ್ಲಿ ತೇಜೋಮವಾದ ವಾಯುಪ್ರತಿಮೆ. ಅದರಲ್ಲಿ ತೇಜೋಮವಾದ ಲಕ್ಷ್ಮೀಪ್ರತಿಮೆ ಎಂದು ಎರಡು ವಿಷ್ಣುವಿನ ಪ್ರತಿಮೆಯನ್ನು ಚಿಂತಿಸಿ ಅದರಲ್ಲಿ ಶ್ರೀಹರಿಯನ್ನು ಚಿಂತಿಸಬೇಕು.

ವಿಷ್ಣು ಲಕ್ಷ್ಮೀ ವಾಯುವ್ಯತಿರಿಕ್ತರಾದ ಶಿವಾದಿಪ್ರತಿಮೆಗಳನ್ನು ಪ್ರತಿಷ್ಠಾಪಿಸುವಾಗ ಮೂರು ಗೋಲಕಗಳನ್ನು ಚಿಂತಿಸಬೇಕು.

ಪರಿದೃಶ್ಯಮಾನವಾದ ಶಿವಾದಿಪ್ರತಿಮೆಯನ್ನು ವಿವಕ್ಷಿಸದೇ ಅದರಲ್ಲಿರುವ ಶಿವಾದಿ ಅನ್ಯದೇವತಾಶರೀರ ಒಂದು ಪ್ರತಿಮೆ. ಶಿವಾದಿದೇವತಾಶರೀರದಲ್ಲಿ ವಾಯುಪ್ರತಿಮೆ ಎರಡು. ವಾಯುವಿನಲ್ಲಿ ಲಕ್ಷ್ಮೀಪ್ರತಿಮೆ ಮೂರು ಹೀಗೆ ಅನ್ಯದೇವತಾವನ್ನು ಪ್ರತಿಷ್ಠಾಪಿಸುವಾಗ ವಿಷ್ಣುವಿಗೆ ಮೂರು ಗೋಲಕವನ್ನು ಚಿಂತಿಸಬೇಕು.

ಪರಿದೃಶ್ಯಮಾನವಾದ ಪ್ರತಿಮೆಯನ್ನು ವಿವಕ್ಷಿಸಿದಾಗಲೂ ಸಹ ಎರಡು ಮತ್ತು ಮೂರು ಗೋಲಕವೆಂದು ವಿವಕ್ಷಿಸಲು ಬರುತ್ತದೆ.

ವಿಷ್ಣು-ಲಕ್ಷ್ಮೀ-ವಾಯುಪ್ರತಿಮೆಗಳನ್ನು ಪ್ರತಿಷ್ಠಾಪಿಸುವಾಗ ಪರಿದೃಶ್ಯಮಾನವಾದ ಪ್ರತಿಮೆಯು ಒಂದು. ಅದರಲ್ಲಿ ತೇಜೋಮಯವಾದ ವಾಯು-ಲಕ್ಷ್ಮೀ ಪ್ರತಿಮೆಗಳು ಸೇರಿ ಒಂದು. ಲಕ್ಷ್ಮೀ ಮತ್ತು ವಾಯುಪ್ರತಿಮೆಗಳು ತೇಜೋಮಯವಾದ್ದರಿಂದ ಈ ಪ್ರತಿಮೆಗಳಲ್ಲಿ ಐಕ್ಯವನ್ನು ಈ ಪಕ್ಷದಲ್ಲಿ ವಿವಕ್ಷಿಸಲಾಗಿದೆ. ಆ ತೇಜೋಮಯಪ್ರತಿಮೆಯಲ್ಲಿ ವಿಷ್ಣುವಿನ ಚಿಂತನೆ ಹೀಗೆ ಎರಡು ಪ್ರತಿಮೆಗಳು.

ಶಿವಾದಿಪರಿವಾರದೇವತೆಗಳನ್ನು ಪ್ರತಿಷ್ಠಾಪಿಸುವಾಗ ಮುಂದೆ ಕಾಣುವ ಶಿವಾದಿಪ್ರತಿಮೆಯು ಒಂದು. ಅದರಲ್ಲಿ ಆಯಾ ದೇವತಾಶರೀರ ಎಂಬ ಎರಡನೇಯ ಪ್ರತಿಮೆ. ಆ ದೇವತಾಶರೀರದಲ್ಲಿ ತೇಜೋಮಯವಾದಕಾರಣ ಐಕ್ಯವನ್ನು ವಿವಕ್ಷಿಸಿ ಲಕ್ಷ್ಮೀ-ವಾಯು ಎಂಬ ಪ್ರತಿಮೆಯು ಮೂರನೇಯದ್ದು. ಅದರಲ್ಲಿ ಭಗವಂತನ ಚಿಂತನೆ. ಹೀಗೆ ಭಗವಂತನ ಮೂರು ಗೋಲಕವನ್ನು ಅನ್ಯದೇವತೆಗಳ ಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗ ಚಿಂತಿಸಬೇಕು.

ಈ ಅಂತಿಮಪಕ್ಷವನ್ನೇ ಶ್ರೀರಘುನಾಥತೀರ್ಥರು ಮತ್ತು ವೇಂಕಟಪತ್ಯಾಚಾರ್ಯರೂ ಸಹ ವಿವಕ್ಷಿಸಿದ್ದಾರೆ.

ಕೆಲವರು ತೇಜೋಮಯಪ್ರತಿಮಾ ಎಂದರೆ ತೇಜೋಭಾಗವಿಶೇಷ ಎಂದು ವಾಖ್ಯಾನಿಸುತ್ತಾರೆ. ಈ ಪಕ್ಷದಲ್ಲಿ ವಿಷ್ಣುಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗ ಪರಿದೃಶ್ಯಮಾನವಾದ ಪ್ರತಿಮೆ ಒಂದು. ಅದರಲ್ಲಿ ತೇಜೋಭಾಗವಿಶೇಷ ಎರಡನೇಯ ಪ್ರತಿಮೆ ಹೀಗೆ ಎರಡು ಪ್ರತಿಮೆಯನ್ನು ಅನುಸಂಧಾನಿಸಬೇಕು.

ಶಿವಾದಿಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗ ಪರಿದೃಶ್ಯಮಾನವಾದ ಪ್ರತಿಮೆಯು ಒಂದು. ಅದರಲ್ಲಿ ತೇಜೋಭಾಗವಿಶೇಷ ಎಂಬ ಎರಡನೇಯ ಪ್ರತಿಮೆ. ಅದರಲ್ಲಿ ಶಿವಾದಿ ದೇವತೆಯು ಮೂರನೇಯ ಪ್ರತಿಮೆ ಎಂದು ವಿಷ್ಣುವಿನ ಮೂರು ಗೋಲಕವನ್ನು ಚಿಂತಿಸಬೇಕು.

ಹೀಗೆ ಈ ಶ್ಲೋಕಕ್ಕೆ ಅನೇಕವಿಧವಾದ ವ್ಯಾಖ್ಯಾನವನ್ನು ಕಾಣುತ್ತೇವೆ. ಒಟ್ಟಿನಲ್ಲಿ ವಿಷ್ಣುಲಕ್ಷ್ಮೀ ವಾಯುಪ್ರತಿಮೆಯನ್ನು ಪ್ರತಿಷ್ಠಾಪಿಸುವಾಗ ವಿಷ್ಣುವಿನ ಎರಡು ಪ್ರತಿಮೆಗಳನ್ನು ಉಳಿದ ದುರ್ಗಾದಿ ಪ್ರತಿಮೆಗಳನ್ನು ಪ್ರತಿಷ್ಠಾಪಿಸುವಾಗ ಶ್ರೀಹರಿಯ ಮೂರು ಗೋಲಕವನ್ನು ಚಿಂತಿಸುವುದು ಪ್ರಧಾನವಾಗಿದೆ.

## ಚತುರ್ಥಾಧ್ಯಾಯವಿಷಯ

ವಿಷ್ಣುರೂಪಿಯಾದ ಭಗವಂತನು ತಂತ್ರಸಾರ ಎಂಬ ಗ್ರಂಥವನ್ನು ರಚಿಸಿ ಅನೇಕ ಜಪ್ಯವಾದ ಮಂತ್ರಗಳನ್ನು ಹೇಳಿರುವನು. ಅವುಗಳನ್ನು ಸಂಗ್ರಹಿಸಿ ಆಚಾರ್ಯರು ಅತ್ಯವಶ್ಯಕವಾದ ಕಲಿಯುಗ ದಲ್ಲಿ ಫಲಪ್ರದವಾದ ಮಂತ್ರಗಳನ್ನು ಉದ್ಧರಿಸಿರುವರು.

**ತಂತ್ರಸಾರಸಂಗ್ರಹದಲ್ಲಿ ಉದ್ಧರಿಸಿದ ವಿಷ್ಣುಮಂತ್ರಗಳು**

1) ಪ್ರಣವಮಂತ್ರ
2) ಅಷ್ಟಾಕ್ಷರನಾರಾಯಣಮಂತ್ರ
3) ವಾಸುದೇವದ್ವಾದಶಾಕ್ಷರಮಂತ್ರ
4) ವ್ಯಾಹೃತಿಮಂತ್ರ
5) ಪುರುಷಸೂಕ್ತಮಂತ್ರ
6) ಬ್ರಹ್ಮಗಾಯತ್ರೀಮಂತ್ರ
7) ವಿಷ್ಣುಷಡಕ್ಷರಮಂತ್ರ
8) ಮಾತೃಕಾಮಂತ್ರ

ಇವು ಪ್ರಥಮಾಧ್ಯಾಯದಲ್ಲಿ ಉದ್ಧರಿಸಿದ ಅಷ್ಟಮಹಾಮಂತ್ರಗಳು

9) ವಿಷ್ಣುಗಾಯತ್ರೀಮಂತ್ರ (ತೃತೀಯಾಧ್ಯಾಯದಲ್ಲಿ ಉದ್ಧೃತವಾದದ್ದು)
10) ತ್ರಯಸ್ತ್ರಿಂಶದಕ್ಷರ ವರಾಹಮಂತ್ರ
11) ಸಪ್ತಾಕ್ಷರ ಭೂವರಾಹಮಂತ್ರ.
12) ಚತುರ್ದಶಾಕ್ಷರ ಭೂವರಾಹಮಂತ್ರ
13) ಶ್ರೀಕರಾಷ್ಟಾಕ್ಷರಮಂತ್ರ
14) ದ್ವಾತ್ರಿಂಶದಕ್ಷರ ನೃಸಿಂಹಮಂತ್ರ
15) ಚತುರ್ವಿಂಶತ್ಯಕ್ಷರ ನೃಸಿಂಹಮಂತ್ರ
16) ನೃಸಿಂಹಗಾಯತ್ರೀಮಂತ್ರ
17) ಷಡಕ್ಷರ ಹಂಸಮಂತ್ರ
18) ಸಪ್ತಾಕ್ಷರ ಹಂಸಮಂತ್ರ
19) ಅಷ್ಟಾಕ್ಷರ ಹಂಸಮಂತ್ರ

**ತಂತ್ರಸಾರಸಂಗ್ರಹೋಕ್ತ ಲಕ್ಷ್ಮೀಮಂತ್ರಗಳು**



**ತಂತ್ರಸಾರಸಂಗ್ರಹೋಕ್ತ ಬ್ರಹ್ಮ-ವಾಯು ಮಂತ್ರಗಳು**



**ಸರಸ್ವತೀ-ಭಾರತೀಮಂತ್ರಗಳು**



**ಶಿವಾದಿದೇವತಾಮಂತ್ರಗಳು**

66) ಯಮಮಂತ್ರ
67) ನಿರ್ಋತಿಮಂತ್ರ
68) ವರುಣಮಂತ್ರ
69) ವಾಯುಮಂತ್ರ
70) ಕುಬೇರಮಂತ್ರ
71) ಈಶಾನಮಂತ್ರ
72) ಸ್ಕಂದಮಂತ್ರ
73) ಸೂರ್ಯಮಂತ್ರ
74) ಗಣೇಶಮಂತ್ರ

## ಸೃಷ್ಟಿ-ಸ್ಥಿತಿ-ಲಯನ್ಯಾಸಗಳು

ಮಂತ್ರಗಳನ್ನು ಜಪಿಸುವದರಿಂದ ಅವುಗಳು ಫಲಪ್ರದವಾಗುದಿಲ್ಲ. ಅವುಗಳಿಗೆ ಅಂಗಕಲಾಪ ಗಳುಂಟು. ಅಂಗಕಲಾಪಗಳಿಂದ ಸಹಿತವಾಗಿ ಭಕ್ತಿಯಿಂದ ವಿಷ್ಣ್ವನುಸಂಧಾನಪೂರ್ವಕವಾಗಿ ಜಪಿಸಿದಾಗ ಮಂತ್ರಗಳು ಫಲಿಸುತ್ತವೆ. ಆದ್ದರಿಂದ ಇವುಗಳಲ್ಲಿ ವರ್ಣನ್ಯಾಸವು ಒಂದು ಅಂಗವಾಗಿದೆ. ಆಯಾ ಮಂತ್ರಗಳನ್ನು ಜಪಿಸುವಾಗ ಆಯಾ ಮಂತ್ರವರ್ಣಗಳಿಂದ ಅಂಗಗಳಲ್ಲಿ ನ್ಯಾಸವನ್ನು ಮಾಡಬೇಕು. ನ್ಯಾಸವೆಂದರೆ ಆಯಾ ಅವಯವಗಳಲ್ಲಿ ಮಂತ್ರಪ್ರತಿಪಾದ್ಯ ರೂಪದ ಚಿಂತನೆ. ಈ ಅಂಗನ್ಯಾಸವು ಸೃಷ್ಟಿನ್ಯಾಸ, ಸ್ಥಿತಿನ್ಯಾಸ, ಲಯನ್ಯಾಸ ಎಂದು ಮೂರು ವಿಧವಾಗಿದೆ. ಇದನ್ನು ಯಾರು ಎಷ್ಟು ಬಾರಿ ಆಚರಿಸಬೇಕು ಎಂದು ಆಚಾರ್ಯರು ತಿಳಿಸಿರುವರು.

**ಸೃಷ್ಟಿಸ್ಥಿತಿಲಯನ್ಯಾಯಾಸಾಃ ಪ್ರಾತಿಲೋಮ್ಯಾನುಲೋಮತಃ ।**
**ಸ್ಥಿತ್ಯಂತಾ ಏವ ವರ್ಣಾನಾಂ ಶ್ರೇಷ್ಠಾ ಏವಂ ಚತುರ್ದಶ ।**
**ಸಂಹೃತ್ಯಂತಾ ಮೋಕ್ಷಿಣಾಂ ತು ಏಕವಿಂಶತಿರೇವ ವಾ ॥ (ತಂ.ಸಾ. 4-131)**

ತಲೆಯಿಂದ ಕ್ರಮವಾಗಿ ಕಾಲಿನ ವರೆಗೆ ನ್ಯಾಸವನ್ನು ಮಾಡಿದರೆ ಸೃಷ್ಟಿನ್ಯಾಸವಾಗುತ್ತದೆ. ವಿಪರೀತವಾಗಿ ಕಾಲಿನಿಂದ ತಲೆವರೆಗೆ ನ್ಯಾಸವನ್ನು ಆಚರಿಸಿದರೆ ಲಯನ್ಯಾಸವಾಗುತ್ತದೆ. ಅರ್ಧಭಾಗ ಕ್ರಮವಾಗಿ ಇನ್ನು ಅರ್ಧಭಾಗ ವಿಪರೀತವಾಗಿ ನ್ಯಾಸವನ್ನು ಮಾಡಿದರೆ ಅದನ್ನು ಸ್ಥಿತಿನ್ಯಾಸ ಎಂದು ಕರೆಯುತ್ತಾರೆ.

ಉದಾಃ- ಅಷ್ಟಾಕ್ಷರಮಂತ್ರಕ್ಕೆ ಸಿರಸ್ಸು, ಅಕ್ಷಿ, ನಾಸಾ, ವಾಕ್, ಹೃದಯ, ನಾಭಿ, ಜಾನು, ಪಾದಗಳಲ್ಲಿ ನ್ಯಾಸವನ್ನು ಆಚಾರ್ಯರು ಪ್ರಥಮಾಧ್ಯಾಯದಲ್ಲಿ ನಿರೂಪಿಸಿದ್ದಾರೆ. ಇಲ್ಲಿ ತಲೆಯಿಂದ ಪಾದದವರೆಗೆ ಅಷ್ಟಾಕ್ಷರಗಳಿಂದ ನ್ಯಾಸವನ್ನು ಮಾಡಿದರೆ ಇದನ್ನು ಸೃಷ್ಟಿನ್ಯಾಸ ಎಂದು ಕರೆಯುತ್ತಾರೆ. ಇದೇ ಅಷ್ಟಾಕ್ಷರಮಂತ್ರಕ್ಕೆ ಪೂರ್ವೋಕ್ತಕ್ರಮದಿಂದ ವಿಪರೀತವಾಗಿ ಅಷ್ಟಾಕ್ಷರಗಳಿಂದ ಪಾದದಿಂದ ಆರಂಭಿಸಿ ಸಿರಸ್ಸಿನವರಗೆ ನ್ಯಾಸವನ್ನು ಮಾಡಿದರೆ ಈ ನ್ಯಾಸವನ್ನು ಲಯನ್ಯಾಸ ಎಂದು ಕರೆಯುತ್ತಾರೆ. ಇದೇ ಅಷ್ಟಾಕ್ಷರವರ್ಣಗಳಿಂದ ಪ್ರಥಮತಃ ಶಿರಸ್ಸು, ನಾಸಾ, ವಾಕ್, ಹೃದಯವಲ್ಲಿ ಕ್ರಮವಾಗಿ, ಪಾದ, ಜಾನು, ನಾಭಿ, ಹೃದಯದಲ್ಲಿ ವಿಪರೀತವಾಗಿ ನ್ಯಾಸವನ್ನು ಮಾಡಿದರೆ ಈ ನ್ಯಾಸವನ್ನು ಸ್ಥಿತಿನ್ಯಾಸವೆಂದು ಕರೆಯುತ್ತಾರೆ.

**ಮೂರ್ಧಾಕ್ಷಿನಾಸಾಮುಖಹೃನ್ನಾಭಿಜಾನುಪದೇಷು ಚ ।**
**ಸೃಷ್ಟಿನ್ಯಾಸೋಽಯಮುದ್ದಿಷ್ಟಃ ಸಂಹಾರಶ್ಚರಣಾದಿಕಃ ॥**

**ಮೂರ್ಧಾಂತಸ್ಥಿತಿರಪ್ಯುಕ್ತಾ ಶಿರ ಆದಿ ಹೃದಂತಕಾ ॥**
**ಆದೌ ಮೂರ್ಧಾನಮಾರಭ್ಯ ವದನಾವಧಿಕಶ್ಚ ಯಃ ।**
**ಪಾದಾದಿಹೃದಯಾಂತಶ್ಚ ಸ್ಥಿತಿರೇವಂ ಪ್ರಕೀರ್ತಿತಾ ॥ ಎಂದು ಹಯಶೀರ್ಷದಲ್ಲಿ ಹೇಳಿದೆ.**

ಎಲ್ಲ ಆಶ್ರಮದವರೂ ಸಹ ಸೃಸ್ಟಿಸ್ಥಿತಿಲಯನ್ಯಾಸಗಳನ್ನು ಆಚರಿಸಬೇಕು. ಗೃಹಸ್ಥರು ಕೊನೆಯಲ್ಲಿ ಸ್ಥಿತಿನ್ಯಾಸವು ಬರುವಂತೆ ಹದಿನಾಲ್ಕುಬಾರಿ ವರ್ಣನ್ಯಾಸವನ್ನು ಮಾಡುವ ಪಕ್ಷವು ಉತ್ತಮವಾಗಿದೆ. ಸನ್ಯಾಸಿಗಳಿಗೆ ಲಯನ್ಯಾಸವು ಕೊನೆಯಲ್ಲಿ ಬರುವಂತೆ 21ಬಾರಿ ವರ್ಣನ್ಯಾಸಮಾಡುವುದು ಉತ್ತಮವಾಗಿದೆ. ಬ್ರಹ್ಮಚಾರಿಗಳು ಸೃಷ್ಟ್ಯಂತವಾದ 10 ನ್ಯಾಸವನ್ನು ಆಚರಿಸುವುದು ಉತ್ತಮ ವಾಗಿದೆ.

**'ಪ್ರತಿಮಾಯಾಮಾತ್ಮನಿ ಚ ನ್ಯಾಸೋಽಯಂ ಸನ್ನಿಧಾನಕೃತ್'** ಎಂದು ಹೇಳಿದಂತೆ ಪೂಜಾಕಾಲದಲ್ಲಿ ಅನುಷ್ಠಿತವಾದ ನ್ಯಾಸವು ಪ್ರತಿಮೆಯಲ್ಲಿ ಭಗವತ್ಸನ್ನಿಧಾನಕಾರಕವಾಗುತ್ತದೆ. ಜಪಕಾಲದಲ್ಲಿ ಅನುಷ್ಠಿತವಾದ ನ್ಯಾಸವು ಜಪಕರ್ತೃವಿನಲ್ಲಿ ಶ್ರೀಹರಿಯ ಸನ್ನಿಧಾನಕಾರಕವಾಗುತ್ತದೆ. ಆದ್ದರಿಂದ ಈ ನ್ಯಾಸವನ್ನು ಜಪ ಹಾಗು ಪೂಜಾಕಾಲದಲ್ಲಿ ಅವಶ್ಯವಾಗಿ ಆಚರಿಸಲೇಬೇಕು.

**ಆಗಮೋಕ್ತೇನ ಮಾರ್ಗೇಣ ನ್ಯಾಸಾನ್ನಿತ್ಯಂ ಕರೋಯತಿ ಯಃ ।**
**ದೇವತಾಭಾವಮಾಪ್ನೋತಿ ಮಂತ್ರಸಿದ್ಧಿಶ್ಚ ಜಾಯತೇ ॥**

ಎಂದು ನ್ಯಾಸವನ್ನು ಆಚರಿಸಿದಾಗ ಮಂತ್ರದೇವತೆಯ ಸಾನ್ನಿಧ್ಯವನ್ನು ಪಡೆಯುತ್ತಾನೆ ಎಂದು ನ್ಯಾಸದ ಫಲವನ್ನು ಆಗಮದಲ್ಲಿ ತಿಳಿಸಲಾಗಿದೆ. ನ್ಯಾಸವನ್ನು ಮಾಡದೇ ಜಪವಮಾಡಿದಾಗ ಅನರ್ಥವನ್ನೂ ಸಹ ಆಗಮದಲ್ಲಿ ಹೇಳಿದೆ.

**ಅಕೃತ್ವಾ ನ್ಯಾಸಜಾತಂ ಯೋ ಮೂಢಾತ್ಮಾ ಕುರುತೇ ಜಪಮ್ ।**
**ವಿಘ್ನೈಃ ಸ ಬಾಧ್ಯತೇ ನೂನಂ ವ್ಯಾಧೈರ್ಮೃಗಶಿಶುರ್ಯಥಾ ॥** ಎಂದು.

ಛಲಾರಿ ಆಚಾರ್ಯರು ಮತ್ತು ಮಂಕಾಲಿ ಆಚಾರ್ಯರು ಏಕಾಕ್ಷರಮಂತ್ರದಿಂದ ಆರಂಭಿಸಿ 32 ಅಕ್ಷರಮಂತ್ರಗಳಿಗೆ ನ್ಯಾಸಸ್ಥಾನಗಳನ್ನು ಶ್ರೀರಘುವರ್ಯತೀರ್ಥವಿರಚಿತಪದ್ಯಗಳನ್ನು ಉದಾಹರಿಸಿ ಹೇಳಿರುವರು.

**ಧರ್ಮಕ್ರಮ**

ಭಗವಂತನ ಅಪರೋಕ್ಷಜ್ಞಾನದಿಂದಲೇ ಮೋಕ್ಷ ಎಂದು ಶಾಸ್ತ್ರವು ಸಾರಿದೆ. ಅಪರೋಕ್ಷಜ್ಞಾನವು ಗುರುಮುಖದಿಂದ ಶಾಸ್ತ್ರಶ್ರವಣಮಾಡಿ ಮನನದಿಂದ ತತ್ತ್ವವನ್ನು ನಿಶ್ಚಯಿಸಿಕೊಂಡ ಅಧಿಕಾರಿಗೆ ಉಪಾಸನೆಯಿಂದ ಬರುತ್ತದೆ. ಅದಕ್ಕಾಗಿ ಅಂತಃಕರಣಶುದ್ಧಿಯು ಬಹುಮುಖ್ಯ. ಆ ಅಂತಃಕರಣ ಶುದ್ಧಿಗಾಗಿ ಮಂತ್ರಜಪಪೂಜಾದಿಸಕಲಸಾಧನಗಳು. ಈ ಶ್ರವಣಾದಿಗಳಿಗಾಗಿ ಗುರುಗಳ ಪ್ರಾಪ್ತಿ ಇತ್ಯಾದಿಗಳು.

ಈ ಅಪರೋಕ್ಷಜ್ಞಾನಸಾಧನವಾದ ಉಪಾಸನೆಯು ಎರಡು ವಿಧವಾಗಿದೆ. 1) ನಿರಂತರ ಸಚ್ಛಾಸ್ತ್ರಗಳ ಚಿಂತನೆ. 2) ಶ್ರೀಹರಿಯ ಧ್ಯಾನ ಎಂದು.

ವಿಷ್ಣುಶಾಸ್ತ್ರಾವಮರ್ಶನವೆಂದರೆ ಶ್ರವಣಮನನದಿಂದ ಚೆನ್ನಾಗಿ ತತ್ವವನ್ನು ನಿಶ್ಚಯಿಸಿಕೊಂಡು ಕೇವಲ ಅಪರೋಕ್ಷಜ್ಞಾನಕ್ಕಾಗಿ ತಾನೆ ನಿರಂತರ ಶಾಸ್ತ್ರಗಳ ಚಿಂತನೆ ಅಥವಾ ಶಿಷ್ಯನು ಸಿಕ್ಕಾಗ ವೈಷ್ಣವಶಾಸ್ತ್ರಗಳ ಪಾಠವನ್ನು ಹೇಳುವುದು.

ಈ ಧ್ಯಾನಕ್ಕೆ ನಾಲ್ಕು ಅಂಗಗಳು. 1) ಯಮ 2) ನಿಯಮ 3) ಆಸನ 4) ಪ್ರಾಣಾಯಾಮ ಎಂದು.

ಈ ಧ್ಯಾನಾಂಗವಾದ ಯಮವು ಐದು. 1) ಅಹಿಂಸಾ 2) ಸತ್ಯ 3) ಅಸ್ತೇಯ 4) ಬ್ರಹ್ಮಚರ್ಯ 5) ಅಪರಿಗ್ರಹ ಎಂದು.

**1) ಅಹಿಂಸೆಃ-** ಇನ್ನೋಬ್ಬರಿಗೆ ತೊಂದರೆಯನ್ನು ಕೊಡದಿರುವುದು.

**ಕರ್ಮಣಾ ಮನಸಾ ವಾಚಾ ಸರ್ವಭೂತೇಷು ಸರ್ವದಾ ।**
**ಅಕ್ಲೇಶವಚನಂ ಪ್ರೋಕ್ತಮಹಿಂಸಾತ್ವೇನ ಯೋಗಿಭಿಃ ॥**

ಕಾಯಾ ವಾಚಾ ಮನಸಾ ಪ್ರಾಣಿಗಳನ್ನು ಹಿಂಸಿಸದಿರುವದೇ ಅಹಿಂಸಾ ಎಂದು ಯಾಜ್ಞ್ಯವಲ್ಕ್ಯರು ಹೇಳಿರುವರು.

**2) ಸತ್ಯಃ-** ಸಜ್ಜನರಿಗೆ ಹಿತವಾದ ನುಡಿ.

ಯಾಥಾರ್ಥನುಡಿಯು ಸತ್ಯವಲ್ಲ. ಕಿಂತು ಪ್ರಾಣಿಗಳಿಗೆ ಹಿತವಾದ ನುಡಿಯನ್ನು ಸತ್ಯ ಎಂದು ಹೇಳುವರು. 'ಸತ್ಯಂ ಭೂತಹಿತಂ ಪ್ರೋಕ್ತಂ ನ ಯಥಾರ್ಥಾಭಿಭಾಷಣಮ್' ।

**3) ಅಸ್ತೇಯಃ-** 'ಕರ್ಮಣಾ ಮನಸಾ ವಾಚಾ ಪರದ್ರವ್ಯೇಷು ನಿಃಸ್ಪೃಹಾ । ಅಸ್ತೇಯಮಿತಿ ಸಂಪ್ರೋಕ್ತಮ್' ಕಾಯಾ ಮನಸಾ ವಾಚಾ ಪರದ್ರವ್ಯದಲ್ಲಿ ಇಚ್ಛೆ ಇಲ್ಲದಿರುವದನ್ನು ಅಸ್ತೇಯ ಎಂದು ಕರೆಯುವರು.

**4) ಬ್ರಹ್ಮಚರ್ಯಃ-** ಮೈಥುನ ತ್ಯಾಗ.

**ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವಥಾ ।**
**ಸರ್ವತ್ರ ಮೈಥುನತ್ಯಾಗಃ ಬ್ರಹ್ಮಚರ್ಯಂ ಪ್ರಚಕ್ಷತೇ ॥**

ದೇಹದಿಂದ ಮಾತಿನಿಂದ ಮನಸ್ಸಿನಿಂದ ಎಲ್ಲ ಅವಸ್ಥೆಗಳಲ್ಲಿ ಎಲ್ಲ ವಿಷಯದಲ್ಲಿ ಮೈಥುನ ತ್ಯಾಗವನ್ನು ಬ್ರಹ್ಮಚರ್ಯ ಎಂದು ಕರೆಯುತ್ತಾರೆ. 'ಸರ್ವಥಾ' 'ಸರ್ವತ್ರ' ಎಂದು ಗೀತೆಯಲ್ಲಿರುವ ವಾಕ್ಯದಿಂದ ಅಷ್ಟವಿಧ ಮೈಥುನತ್ಯಾಗವನ್ನು ಬ್ರಹ್ಮಚರ್ಯ ಎನ್ನುವರು.

**ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಮ್ ।**
**ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತಿರೇವ ಚ ।**
**ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ ॥**

**ಮೂರ್ಧಾಕ್ಷಿನಾಸಾಮುಖಹೃನ್ನಾಭಿಜಾನುಪದೇಷು ಚ ।**
**ಸೃಷ್ಟಿನ್ಯಾಸೋಽಯಮುದ್ದಿಷ್ಟಃ ಸಂಹಾರಶ್ಚರಣಾದಿಕಃ ॥**

**ಮೂರ್ಧಾಂತಸ್ಥಿತಿರಪ್ಯುಕ್ತಾ ಶಿರ ಆದಿ ಹೃದಂತಕಾ ॥**
**ಆದೌ ಮೂರ್ಧಾನಮಾರಭ್ಯ ವದನಾವಧಿಕಶ್ಚ ಯಃ ।**
**ಪಾದಾದಿಹೃದಯಾಂತಶ್ಚ ಸ್ಥಿತಿರೇವಂ ಪ್ರಕೀರ್ತಿತಾ ॥ ಎಂದು ಹಯಶೀರ್ಷದಲ್ಲಿ ಹೇಳಿದೆ.**

ಎಲ್ಲ ಆಶ್ರಮದವರೂ ಸಹ ಸೃಸ್ಟಿಸ್ಥಿತಿಲಯನ್ಯಾಸಗಳನ್ನು ಆಚರಿಸಬೇಕು. ಗೃಹಸ್ಥರು ಕೊನೆಯಲ್ಲಿ ಸ್ಥಿತಿನ್ಯಾಸವು ಬರುವಂತೆ ಹದಿನಾಲ್ಕುಬಾರಿ ವರ್ಣನ್ಯಾಸವನ್ನು ಮಾಡುವ ಪಕ್ಷವು ಉತ್ತಮವಾಗಿದೆ. ಸನ್ಯಾಸಿಗಳಿಗೆ ಲಯನ್ಯಾಸವು ಕೊನೆಯಲ್ಲಿ ಬರುವಂತೆ 21ಬಾರಿ ವರ್ಣನ್ಯಾಸಮಾಡುವುದು ಉತ್ತಮವಾಗಿದೆ. ಬ್ರಹ್ಮಚಾರಿಗಳು ಸೃಷ್ಟ್ಯಂತವಾದ 10 ನ್ಯಾಸವನ್ನು ಆಚರಿಸುವುದು ಉತ್ತಮ ವಾಗಿದೆ.

**'ಪ್ರತಿಮಾಯಾಮಾತ್ಮನಿ ಚ ನ್ಯಾಸೋಽಯಂ ಸನ್ನಿಧಾನಕೃತ್'** ಎಂದು ಹೇಳಿದಂತೆ ಪೂಜಾಕಾಲದಲ್ಲಿ ಅನುಷ್ಠಿತವಾದ ನ್ಯಾಸವು ಪ್ರತಿಮೆಯಲ್ಲಿ ಭಗವತ್ಸನ್ನಿಧಾನಕಾರಕವಾಗುತ್ತದೆ. ಜಪಕಾಲದಲ್ಲಿ ಅನುಷ್ಠಿತವಾದ ನ್ಯಾಸವು ಜಪಕರ್ತೃವಿನಲ್ಲಿ ಶ್ರೀಹರಿಯ ಸನ್ನಿಧಾನಕಾರಕವಾಗುತ್ತದೆ. ಆದ್ದರಿಂದ ಈ ನ್ಯಾಸವನ್ನು ಜಪ ಹಾಗು ಪೂಜಾಕಾಲದಲ್ಲಿ ಅವಶ್ಯವಾಗಿ ಆಚರಿಸಲೇಬೇಕು.

**ಆಗಮೋಕ್ತೇನ ಮಾರ್ಗೇಣ ನ್ಯಾಸಾನ್ನಿತ್ಯಂ ಕರೋಯತಿ ಯಃ ।**
**ದೇವತಾಭಾವಮಾಪ್ನೋತಿ ಮಂತ್ರಸಿದ್ಧಿಶ್ಚ ಜಾಯತೇ ॥**

ಎಂದು ನ್ಯಾಸವನ್ನು ಆಚರಿಸಿದಾಗ ಮಂತ್ರದೇವತೆಯ ಸಾನ್ನಿಧ್ಯವನ್ನು ಪಡೆಯುತ್ತಾನೆ ಎಂದು ನ್ಯಾಸದ ಫಲವನ್ನು ಆಗಮದಲ್ಲಿ ತಿಳಿಸಲಾಗಿದೆ. ನ್ಯಾಸವನ್ನು ಮಾಡದೇ ಜಪವಮಾಡಿದಾಗ ಅನರ್ಥವನ್ನೂ ಸಹ ಆಗಮದಲ್ಲಿ ಹೇಳಿದೆ.

**ಅಕೃತ್ವಾ ನ್ಯಾಸಜಾತಂ ಯೋ ಮೂಢಾತ್ಮಾ ಕುರುತೇ ಜಪಮ್ ।**
**ವಿಘ್ನೈಃ ಸ ಬಾಧ್ಯತೇ ನೂನಂ ವ್ಯಾಧ್ರೈರ್ಮೃಗಶಿಶುರ್ಯಥಾ ॥** ಎಂದು.

ಛಲಾರಿ ಆಚಾರ್ಯರು ಮತ್ತು ಮಂಕಾಲಿ ಆಚಾರ್ಯರು ಏಕಾಕ್ಷರಮಂತ್ರದಿಂದ ಆರಂಭಿಸಿ 32 ಅಕ್ಷರಮಂತ್ರಗಳಿಗೆ ನ್ಯಾಸಸ್ಥಾನಗಳನ್ನು ಶ್ರೀರಘುವರ್ಯತೀರ್ಥವಿರಚಿತಪದ್ಯಗಳನ್ನು ಉದಾಹರಿಸಿ ಹೇಳಿರುವರು.

**ಧರ್ಮಕ್ರಮ**

ಭಗವಂತನ ಅಪರೋಕ್ಷಜ್ಞಾನದಿಂದಲೇ ಮೋಕ್ಷ ಎಂದು ಶಾಸ್ತ್ರವು ಸಾರಿದೆ. ಅಪರೋಕ್ಷಜ್ಞಾನವು ಗುರುಮುಖದಿಂದ ಶಾಸ್ತ್ರಶ್ರವಣಮಾಡಿ ಮನನದಿಂದ ತತ್ತ್ವವನ್ನು ನಿಶ್ಚಯಿಸಿಕೊಂಡ ಅಧಿಕಾರಿಗೆ ಉಪಾಸನೆಯಿಂದ ಬರುತ್ತದೆ. ಅದಕ್ಕಾಗಿ ಅಂತಃಕರಣಶುದ್ಧಿಯು ಬಹುಮುಖ್ಯ. ಆ ಅಂತಃಕರಣ ಶುದ್ಧಿಗಾಗಿ ಮಂತ್ರಜಪಪೂಜಾದಿಸಕಲಸಾಧನಗಳು. ಈ ಶ್ರವಣಾದಿಗಳಿಗಾಗಿ ಗುರುಗಳ ಪ್ರಾಪ್ತಿ ಇತ್ಯಾದಿಗಳು.

ಈ ಅಪರೋಕ್ಷಜ್ಞಾನಸಾಧನವಾದ ಉಪಾಸನೆಯು ಎರಡು ವಿಧವಾಗಿದೆ. 1) ನಿರಂತರ ಸಚ್ಛಾಸ್ತ್ರಗಳ ಚಿಂತನೆ. 2) ಶ್ರೀಹರಿಯ ಧ್ಯಾನ ಎಂದು.

ವಿಷ್ಣುಶಾಸ್ತ್ರಾವಮರ್ಶನವೆಂದರೆ ಶ್ರವಣಮನನದಿಂದ ಚೆನ್ನಾಗಿ ತತ್ವವನ್ನು ನಿಶ್ಚಯಿಸಿಕೊಂಡು ಕೇವಲ ಅಪರೋಕ್ಷಜ್ಞಾನಕ್ಕಾಗಿ ತಾನೆ ನಿರಂತರ ಶಾಸ್ತ್ರಗಳ ಚಿಂತನೆ ಅಥವಾ ಶಿಷ್ಯನು ಸಿಕ್ಕಾಗ ವೈಷ್ಣವಶಾಸ್ತ್ರಗಳ ಪಾಠವನ್ನು ಹೇಳುವುದು.

ಈ ಧ್ಯಾನಕ್ಕೆ ನಾಲ್ಕು ಅಂಗಗಳು. 1) ಯಮ 2) ನಿಯಮ 3) ಆಸನ 4) ಪ್ರಾಣಾಯಾಮ ಎಂದು.

ಈ ಧ್ಯಾನಾಂಗವಾದ ಯಮವು ಐದು. 1) ಅಹಿಂಸಾ 2) ಸತ್ಯ 3) ಅಸ್ತೇಯ 4) ಬ್ರಹ್ಮಚರ್ಯ 5) ಅಪರಿಗ್ರಹ ಎಂದು.

**1) ಅಹಿಂಸೆಃ-** ಇನ್ನೊಬ್ಬರಿಗೆ ತೊಂದರೆಯನ್ನು ಕೊಡದಿರುವುದು.

**ಕರ್ಮಣಾ ಮನಸಾ ವಾಚಾ ಸರ್ವಭೂತೇಷು ಸರ್ವದಾ ।**
**ಅಕ್ಲೇಶವಚನಂ ಪ್ರೋಕ್ತಮಹಿಂಸಾತ್ವೇನ ಯೋಗಿಭಿಃ ॥**

ಕಾಯಾ ವಾಚಾ ಮನಸಾ ಪ್ರಾಣಿಗಳನ್ನು ಹಿಂಸಿಸದಿರುವದೇ ಅಹಿಂಸಾ ಎಂದು ಯಾಜ್ಞ್ಯವಲ್ಕ್ಯರು ಹೇಳಿರುವರು.

**2) ಸತ್ಯಃ-** ಸಜ್ಜನರಿಗೆ ಹಿತವಾದ ನುಡಿ.

ಯಾಥಾರ್ಥನುಡಿಯು ಸತ್ಯವಲ್ಲ. ಕಿಂತು ಪ್ರಾಣಿಗಳಿಗೆ ಹಿತವಾದ ನುಡಿಯನ್ನು ಸತ್ಯ ಎಂದು ಹೇಳುವರು. 'ಸತ್ಯಂ ಭೂತಹಿತಂ ಪ್ರೋಕ್ತಂ ನ ಯಥಾರ್ಥಾಭಿಭಾಷಣಮ್' ।

**3) ಅಸ್ತೇಯಃ-** 'ಕರ್ಮಣಾ ಮನಸಾ ವಾಚಾ ಪರದ್ರವ್ಯೇಷು ನಿಸ್ಪೃಹಾ । ಅಸ್ತೇಯಮಿತಿ ಸಂಪ್ರೋಕ್ತಮ್' ಕಾಯಾ ಮನಸಾ ವಾಚಾ ಪರದ್ರವ್ಯದಲ್ಲಿ ಇಚ್ಛೆ ಇಲ್ಲದಿರುವದನ್ನು ಅಸ್ತೇಯ ಎಂದು ಕರೆಯುವರು.

**4) ಬ್ರಹ್ಮಚರ್ಯಃ-** ಮೈಥುನ ತ್ಯಾಗ.

**ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವಥಾ ।**
**ಸರ್ವತ್ರ ಮೈಥುನತ್ಯಾಗಃ ಬ್ರಹ್ಮಚರ್ಯಂ ಪ್ರಚಕ್ಷತೇ ॥**

ದೇಹದಿಂದ ಮಾತಿನಿಂದ ಮನಸ್ಸಿನಿಂದ ಎಲ್ಲ ಅವಸ್ಥೆಗಳಲ್ಲಿ ಎಲ್ಲ ವಿಷಯದಲ್ಲಿ ಮೈಥುನ ತ್ಯಾಗವನ್ನು ಬ್ರಹ್ಮಚರ್ಯ ಎಂದು ಕರೆಯುತ್ತಾರೆ. 'ಸರ್ವಥಾ' 'ಸರ್ವತ್ರ' ಎಂದು ಗೀತೆಯಲ್ಲಿರುವ ವಾಕ್ಯದಿಂದ ಅಷ್ಟವಿಧ ಮೈಥುನತ್ಯಾಗವನ್ನು ಬ್ರಹ್ಮಚರ್ಯ ಎನ್ನುವರು.

**ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಮ್ ।**
**ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತಿರೇವ ಚ ।**
**ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ ॥**

ಎಂದು ಹೇಳಿದಂತೆ ಎಂಟು ವಿಧವಾದ ಮೈಥುನತ್ಯಾಗವನ್ನು ಬ್ರಹ್ಮಚರ್ಯ ಎಂದು ತಿಳಿಯಬೇಕು.

5) **ಅಪರಿಗ್ರಹಃ-** ಇನ್ನೊಬ್ಬರ ಮುಂದೆ ಕೈಯೊಡ್ಡದಿರುವದು. ಲೋಕಸಂಗ್ರಹ, ದ್ರವ್ಯಸಂಗ್ರಹ, ಲೌಕಿಕವ್ಯವಹಾರ ಇವುಗಳನ್ನು ಬಿಡುವುದೂ ಸಹ ಅಪರಿಗ್ರಹವಾಗಿದೆ. ಅರ್ಥಾತ್ ವೈರಾಗ್ಯ ಎಂದು ಅಭಿಪ್ರಾಯ.

2) **ನಿಯಮಗಳುಃ-** 1) ಶೌಚ 2) ತಪಸ್ಸು 3) ತುಷ್ಟಿ 4) ಸ್ವಾಧ್ಯಾಯ 5) ಹರಿಪೂಜನ ಈ ಐದು ನಿಯಮಗಳು.

1) **ಶೌಚಃ-** ದೇಹ-ಮನಸ್ಸುಗಳ ನಿರ್ಮಲತೆ.

ಈ ಶೌಚವು ಎರಡು ವಿಧ. ಬಾಹ್ಯ ಆಂತರ ಎಂದು.

**ಶೌಚಂ ತು ದ್ವಿವಿಧಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ತಥಾ ।**
**ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಮನಶ್ಶುದ್ಧಿಸ್ತಥೋತ್ತರಮ್ ।**

2) **ತಪಸ್ಸುಃ-** ಜಪ, ಹೋಮ, ತೀರ್ಥಾಟನಾದಿರೂಪವಾದದ್ದು.

3) **ತುಷ್ಟಿಃ-** ಇದ್ದದ್ದರಲ್ಲಿ ತೃಪ್ತಿ.

4) **ಸ್ವಾಧ್ಯಾಯಃ-** ವೇದಾಧ್ಯಯನ. ಗುರುಸೇವೆಯೂ ಸ್ವಾಧ್ಯಾಯದಲ್ಲಿ ಸೇರಿದೆ. ಈ ಸ್ವಾಧ್ಯಾಯವು ಎರಡು ವಿಧವಾಗಿದೆ. 1) ಸಾಮಾನ್ಯತಃ ವಾಚ್ಯತ್ವೇನ ಶ್ರೀಹರಿಯ ಸ್ಮರಣವಿದ್ದರೂ ಸಹ ವಾಕ್ಯಾರ್ಥಜ್ಞಾನಪೂರ್ವಕವಾಗಿ ವಿಷ್ಣುಸ್ಮೃತಿರಹಿತವಾದದ್ದು 2) ವಾಕ್ಯಾರ್ಥಜ್ಞಾನಪೂರ್ವಕ ವಿಷ್ಣುಸ್ಮರಣಸಹಿತವಾದದ್ದು ಎಂದು. ಮೊದಲನೇಯದಾದ ವಿಷ್ಣುಸ್ಮೃತಿರಹಿತವಾದ ಸ್ವಾಧ್ಯಾಯವು ನಿಯಮಪ್ರಬೇಧವಾಗಿದೆ. ಧ್ಯಾನಕ್ಕೆ ಅಂಗವಾಗಿದೆ. ವಿಷ್ಣುಸ್ಮೃತಿಯುಕ್ತವಾದ ಸ್ವಾಧ್ಯಾಯವು ಸ್ವಯಮೇವ ಶಾಸ್ತ್ರಾನುಚಿಂತನರೂಪವಾದ್ದರಿಂದ ಧ್ಯಾನಸಮಕಕ್ಷ್ಯವಾದ ನಿದಿಧ್ಯಾಸನರೂಪವಾಗಿದೆ. ಇದು ಧ್ಯಾನಾಂಗವಲ್ಲ.

5) **ಹರಿಪೂಜನಃ-** ಪ್ರಥಮಾಧ್ಯಾಯೋಕ್ತಕ್ರಮದಿಂದ ಭಕ್ತಿಯಿಂದ ಶ್ರೀಹರಿಯ ಶೋಡಷೋಪಾಚಾರ ಪೂಜೆ. ಇವು ನಿಯಮಗಳು.

3) **ಆಸನಃ-** ವೀರ, ಪದ್ಮ, ಸ್ವಸ್ತಿಕಾದಿ ಆಸನಗಳು.

4) **ಪ್ರಾಣಾಯಾಮಃ-** ರೇಚಕ ಪೂರಕ ಕುಂಭಕ ಎಂಬ ಪ್ರಾಣಾಯಾಮ. ಈ ಪ್ರಾಣಾಯಾಮವು ಮಂತ್ರೋಚ್ಚಾರಣ ವಿಷ್ಣುಸ್ಮೃತಿರಹಿತವಾದಾಗ ಧ್ಯಾನಾಂಗವಾಗಿ ನಿಯಮದಲ್ಲಿ ಸೇರುತ್ತದೆ. ವಿಷ್ಣುಸ್ಮೃತಿ ಮಂತ್ರೋಚ್ಚಾರಣ, ಮಂತ್ರಪ್ರತಿಪಾದ್ಯದೇವತಾಸ್ಮರಣಯುಕ್ತವಾದಾಗ ಸ್ವಯಂ ನಿದಿಧ್ಯಾಸನರೂಪವಾಗುತ್ತದೆ. ಆಗ ಅದು ಧ್ಯಾನಂಗವಲ್ಲ.

**ಆಸಾ ಶೌಚಂ ಪ್ರಾಣಾಯಾಮೋ ನಿಷ್ಪರಿಗ್ರಹಪೂರ್ವಕಾಃ ।**
**ತಪಆದ್ಯಾಃ ಕ್ರಮಾತ್ಸರ್ವ ಉತ್ತರೋತ್ತರತೋಽಧಿಕಾಃ ॥ (ತಂ,ಸಾ. 4-152)**

ಆಸನ, ಶೌಚ, ಪ್ರಾಣಾಯಾಮ, ಅಪರಿಗ್ರಹ, ಅಹಿಂಸಾ, ಸತ್ಯ , ಅಸ್ತೇಯ, ಬ್ರಹ್ಮಚರ್ಯ, ತಪಸ್ಸು, ತುಷ್ಟಿ, ಸ್ವಾಧ್ಯಾಯ, ಹರಿಪೂಜನ ಎಂಬ ಯಮ ನಿಯಮಗಳಲ್ಲಿ ಹಿಂದಿನವುಗಳಿಗಿಂಲೂ ಮುಂದಿನವುಗಳು ಉತ್ತಮವಾಗಿವೆ. ಯೋಗದೀಪಿಕಾದಲ್ಲಿಯೂ ಸಹ ಈ ವಿಷಯವನ್ನು ನಿರೂಪಿಸ ಲಾಗಿದೆ.

**ಆಸಾ ಶೌಚಂ ಚ ಧರ್ಮಾಂಗೇ ಪ್ರಾಣಾಯಾಮೋಽಪರಿಗ್ರಹಃ ।**
**ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ತಪಸ್ತಥಾ ॥**

**ತುಷ್ಟಿರ್ಯಜ್ಞಾದಯೋ ಧರ್ಮಾಃ ಸ್ವಾಧ್ಯಾಯೋಽಭ್ಯರ್ಚನಂ ಹರೇಃ ।**
**ಉತ್ತರೋತ್ತರಮೇತಾನಿ ಕರ್ತವ್ಯಾನಿ ವಿಶೇಷತಃ ॥ ಎಂದು.**

**ಸರ್ವತಃ ಶ್ರವಣಾದ್ಯಾಸ್ತು ಮುಖ್ಯಾಮುಕ್ತಿಪ್ರಸಾದನೇ ।**
**ಅಜ್ಞಸ್ಯ ಶ್ರವಣಂ ಶ್ರೇಷ್ಠಮಯುಕ್ತೇರ್ಮನನಂ ತಥಾ ॥**

**ಧ್ಯಾನಂ ನಿಶ್ಚಿತತತ್ತ್ವಸ್ಯ ತಸ್ಮಾಚ್ಛಾಸ್ತ್ರವಿಮರ್ಶನಮ್ ।**
**ವರಂ ದಶಗುಣಂ ತಸ್ಮಾತ್ ವ್ಯಾಖ್ಯೈಕಸ್ಯ ಶತೋತ್ತರಾ ॥ (ತಂ.ಸಾ. 4-153,154)**

ಆಸನಾದಿಗಳಿಗಿಂತಲೂ ಸಹ ಶ್ರವಣಮನನನಿಧಿಧ್ಯಾಸನಗಳು ಉತ್ತಮವಾಗಿದೆ. ಅವುಗಳಲ್ಲಿಯೂ ಸಹ ಶಾಸ್ತ್ರಾರ್ಥಜ್ಞಾನಶೂನ್ಯನಾದವನಿಗೆ ಗುರುಮುಖದಿಂದ ಶಾಸ್ತ್ರಶ್ರವಣವು ಶ್ರೇಷ್ಠವಾಗಿದೆ. ಶಾಸ್ತ್ರಾರ್ಥವನ್ನು ತಿಳಿದವನಿಗೆ ಯುಕ್ತಿಯನ್ನು ತಿಳಿಯದವನಿಗೆ ಶ್ರವಣಕ್ಕಿಂತಲೂ ಮನನವು ಉತ್ತಮವಾಗಿದೆ. ಶ್ರವಣಮನನಗಳಿಂದ ತತ್ತ್ವನಿಶ್ಚಯವನ್ನು ಪಡೆದವನಿಗೆ ಶ್ರವಣಮನನಕ್ಕಿಂತಲೂ ಧ್ಯಾನವು ಉತ್ತಮವಾಗಿದೆ. ಧ್ಯಾನಕ್ಕಿಂತಲೂ ಶಾಸ್ತ್ರವಿಮರ್ಶೆಯು ಹತ್ತು ಪಟ್ಟು ಮಿಗಿಲಾಗಿವೆ. ಧ್ಯಾನಕಾಲದಲ್ಲಿ ಭಗವಂತನ ಬಹಳ ಗುಣಗಳ ಪ್ರತಿಭಾಸವು ಆಗುವದಿಲ್ಲ. ಶಾಸ್ತ್ರಚಿಂತನಕಾಲದಲ್ಲಿ ಶಾಸ್ತ್ರೋಕ್ತವಾದ ಗುಣಗಳ ಪ್ರತಿಭಾಸವು ಆಗುತ್ತಿರುವದರಿಂದ ಧ್ಯಾನಕ್ಕಿಂಲೂ ಶಾಸ್ತ್ರಚಿಂತನವು ಹತ್ತು ಪಟ್ಟು ಉತ್ತಮ. ಶಾಸ್ತ್ರಾಭ್ಯಾಸಕ್ಕಿಂತಲೂ ಒಬ್ಬ ಶಿಷ್ಯನಿಗೆ ವ್ಯಾಖ್ಯಾನಿಸುವುದು ನೂರು ಪಟ್ಟು ಉತ್ತಮವಾಗಿದೆ.

**ಶೌಚಾಸನೇ ತ್ವಂಗಮಾತ್ರಂ ನ ಪೃಥಕ್ ಧರ್ಮಸಾಧನಮ್ ।**
**ಪ್ರಾಣಾಯಾಮಾದಯಸ್ತುಷ್ಟಿಪರ್ಯಂತಾ ದ್ವಿಗುಣಾಧಿಕಾಃ ॥**

**ಸ್ವಾಧ್ಯಾಯೋಽತಃ ಕೋಟಿಗುಣಸ್ತತೋಽನಂತಗುಣಾ ಹರೇಃ ।**
**ಪೂಜಾ ತತ್ತ್ರಿಗುಣಂ ಧ್ಯಾನಮಿತಿ ಧರ್ಮಕ್ರಮಃ ಸ್ಮೃತಃ ॥ (ತಂ.ಸಾ. 4- 157,158)**

ಈ ಶೌಚ ಮತ್ತು ಆಸನಗಳು ಸರ್ವಕರ್ಮಗಳಿಗೂ ಅಂಗವಾಗಿವೆ. ಸ್ವತಂತ್ರವಾಗಿ ಧರ್ಮಸಾಧನ ವಾಗಿಲ್ಲ. ಉಳಿದ ಪ್ರಾಣಾಯಾಮ, ಅಪರಿಗ್ರಹ, ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ತಪಸ್ಸು, ತುಷ್ಟಿ ಇವುಗಳು ಕ್ರಮವಾಗಿ ಒಂದಕ್ಕಿಂತಲೂ ಒಂದು ಎರಡು ಪಟ್ಟು ಧರ್ಮಸಾಧನವಾಗಿವೆ.

ತುಷ್ಟಿಕ್ಕಿಂತಲೂ ಸ್ವಾಧ್ಯಾಯವು ಕೋಟಿಪಟ್ಟು ಮಿಗಿಲಾಗಿ ಧರ್ಮಸಾಧನವಾಗಿದೆ. ಸ್ವಾಧ್ಯಾಯಕ್ಕಿಂಲೂ ತಂತ್ರಸಾರೋಕ್ತ ಶ್ರೀಹರಿಪೂಜೆಯು ಅಸಂಖ್ಯಗುಣಗಳಿಂದ ಹೆಚ್ಚಾಗಿ ಧರ್ಮಸಾಧನವಾಗಿದೆ. ಶ್ರೀಹರಿಯ ಪೂಜೆಗಿಂತಲೂ ಧ್ಯಾನವು ಮೂರು ಪಟ್ಟು ಹೆಚ್ಚು ಧರ್ಮಸಾಧನವಾಗಿದೆ. ಧ್ಯಾನಕ್ಕಿಂತಲೂ ಸ್ವಯಂ ತಾನು ಮಾಡುವ ಶಾಸ್ತ್ರಚಿಂತನೆಯು ಹತ್ತು ಪಟ್ಟು ಪುಣ್ಯಸಾಧಕವಾಗಿದೆ. ಶಾಸ್ತ್ರಚಿಂತನಕ್ಕಿಂತಲೂ ಮಿಗಿಲಾಗಿ ಒಬ್ಬ ಶಿಷ್ಯನಿಗೆ ಪಾಠಹೇಳುವುದು ನೂರು ಪಟ್ಟು ಅಧಿಕವಾಗಿ ಧರ್ಮಸಾಧನವಾಗಿದೆ. ಆದ್ದರಿಂದಲೇ 'ತದ್ಧಿತಪಸ್ತದ್ಧಿ ತಪಃ' ಎಂದು ಉಪನಿಷತ್ತು ಸಾರಿದೆ. ಇದು ಧರ್ಮಸಾಧನಗಳಲ್ಲಿರುವ ತಾರತಮ್ಯಕ್ರಮ. ಇದಕ್ಕನುಗುಣವಾಗಿ ಧರ್ಮಗಳ ಸಂಪಾದನೆಯನ್ನು ಮಾಡಬೇಕು.

ಆಚಾರ್ಯರು ಅಧಿಕಾರಿಯು ಅತ್ಯಂತ ಅವಶ್ಯವಾಗಿ ಅನುಷ್ಠಾನಿಸಬೇಕಾದ ಅನೇಕವಿಷಯಗಳನ್ನು ತಂತ್ರಸಾರಸಂಗ್ರಹದಲ್ಲಿ ನಿರೂಪಿಸಿದ್ದಾರೆ. ಕೇವಲ ಇಲ್ಲಿ ಸ್ಥಾಲಿಪುಲಾಕನ್ಯಾಯೇನ ಕೆಲವು ವಿಷಯಗಳನ್ನು ನಿರೂಪಿಸಲಾಗಿದೆ.

### ತಂತ್ರಸಾರ ಸಂಗ್ರಹ ವ್ಯಾಖ್ಯಾನಗಳು

ಈ ತಂತ್ರಸಾರಸಂಗ್ರಹಕ್ಕೆ ಅನೇಕ ಮಹನೀಯರು ವ್ಯಾಖ್ಯಾನವನ್ನು ಮಾಡಿರುವರು. ಅವರೆಲ್ಲರೂ ಸಹ ಅಪೂರ್ವವಾದ ಪಂಚರಾತ್ರಾದಿಪ್ರಮೇಯಗಳನ್ನು ತಿಳಿಸಿರುವರು. ಆ ವ್ಯಾಖ್ಯಾನಗಳಲ್ಲಿ ಕೆಲವು ಉಪಲಬ್ಧವಾಗಿವೆ. ಕೆಲವು ಉಪಲಬ್ಧವಿಲ್ಲ. ಉಪಲಬ್ಧವಾದವುಗಳಲ್ಲಿ ಕೆಲವು ಮುದ್ರಿತವೂ ಆಗಿವೆ. ಈ ವ್ಯಾಖ್ಯಾನಗಳ ಪಟ್ಟಿಯನ್ನು ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರು ತಮ್ಮ ಭಲಾರೀ ವ್ಯಾಖ್ಯಾನಸಹಿತ ತಂತ್ರಸಾರಸಂಗ್ರಹ ಪುಸ್ತಕದ ಮುನ್ನುಡಿಯಲ್ಲಿ ನೀಡಿರುವರು.

1) ವ್ಯಾಸತೀರ್ಥಕೃತ ಟೀಕಾ 2) ವಾದಿರಾಜಕೃತಟೀಕಾ

3) ವೇದವೇದ್ಯಕೃತಟೀಕಾ 4) ಭಲಾರೀ ನರಸಿಂಹಾಚಾರ್ಯಕೃತ ಟೀಕಾ

5) ಭಲಾರೀ ಶೇಷಾಚಾರ್ಯಕೃತಃ- ತಂತ್ರಸಾರಾರ್ಥಸಂಗ್ರಹಃ

6) ಬಿದರಹಳ್ಳಿ ವೇಕಂಟಪತ್ಯಾಚಾರ್ಯಕೃತಟೀಕಾ- ಗುರ್ವರ್ಥದೀಧಿತಿಃ

7) ತಾತ್ಪರ್ಯನಿರ್ಣಯಟಿಪ್ಪಣೀಕರ್ತೃ ಜನಾರ್ಧನಭಟ್ಟಪುತ್ರ ವೇದವ್ಯಾಸಾಚಾರ್ಯಕೃತ ಪದಭಾವಪ್ರಭೋಧಿನೀ

8) ವಿದ್ಯಾಧೀಶತೀರ್ಥಶಿಷ್ಯ ನೃಸಿಂಹಭಿಕ್ಷುಕೃತಟೀಕಾ

9) ತಾಮ್ರಪರ್ಣಿ ಆನಂದತೀರ್ಥಾಚಾರ್ಯಕೃತಟೀಕಾ- ತಂತ್ರರತ್ನಪ್ರಕಾಶಿಕಾ

10) ತಾಮ್ರಪರ್ಣಿ ಶ್ರೀನಿವಾಸಾಚಾರ್ಯಕೃತಟೀಕಾ- ತಂತ್ರರತ್ನಾವಳೀ

11) ಬಿದರಹಳ್ಳಿ ಶ್ರೀನಿವಾಸತೀರ್ಥಕೃತಟೀಕಾ

12) ರಘುನಾಥತೀರ್ಥಕೃತಟೀಕಾ- ತತ್ವಕಣಿಕಾ

13) ಭಲಾರೀ ರಾಮದಾಸಾಚಾರ್ಯಕೃತಟೀಕಾ- ತಂತ್ರಸಾರಸಂಗ್ರಹಭಾವಚಂದ್ರಿಕಾ

14) ವಾಸುದೇವಾಚಾರ್ಯಶಿಷ್ಯ ಆನಂದಾಚಾರ್ಯಪುತ್ರ ಅನಂತಾಚಾರ್ಯಸುತವೇಂಕಟ-ನರಸಿಂಹಾಚಾರ್ಯಕೃತಟೀಕಾ- ತಂತ್ರಸಾರವಿವೃತಿಃ

15) ವಸುಧೇಂದ್ರತೀರ್ಥಕೃತಟೀಕಾ

16) ಮಂಕಾಲೀ ಧರ್ಮಾಚಾರ್ಯಕೃತಟೀಕಾ

17) ಸತ್ಯಪ್ರಿಯತೀರ್ಥಶಿಷ್ಯ ಯಾಡಿಕೀ ನರಸಿಂಹಾಚಾರ್ಯಕೃತಟೀಕಾ

18) ರೋಟ್ಟಿ ವೇಂಕಟಾದ್ರಿಭಟ್ಟಕೃತಟೀಕಾ

19) ಪೂರ್ಣಬೋಧಾಚಾರ್ಯಶಿಷ್ಯವಾಸುದೇವಕೃತಟೀಕಾ- ತಂತ್ರಸಾರಾರ್ಥಚಂದ್ರಿಕಾ

20) ಶ್ರೀಮುಷ್ಣಂ ಸುಬ್ಬಾಚಾರ್ಯಕೃತಟೀಕಾ

21) ಜನಾರ್ದನಭಟ್ಟಸುತ ತಮ್ಮಣ್ಣಾಚಾರ್ಯಕೃತಟೀಕಾ- ತಂತ್ರಸಾರಭಾವಬೋಧಿನೀ

22) ಗಂಗೋದಕಮಿಶ್ರಕೃತಟೀಕಾ

23) ವೇದವೇದ್ಯತೀರ್ಥಶಿಷ್ಯಕೃತಟೀಕಾ

24) ತಂತ್ರಸಾರಸಂಗ್ರಹವಿವೃತಿಃ - ಗೂಢಕರ್ತೃಕಾ

ಛಲಾರಿ ಶೇಷಾಚಾರ್ಯಕೃತ ತಂತ್ರಸಾರಾರ್ಥಸಂಗ್ರಹ, ಶ್ರೀರಘುನಾಥತೀರ್ಥರ ತತ್ತ್ವಕಣಿಕಾ ವ್ಯಾಖ್ಯಾನ, ವೇಂಕಟಪತ್ಯಾಚಾರ್ಯರ ಗುರ್ವರ್ಥದೀಧಿತಿ, ಮಂಕಾಲಿ ಧರ್ಮಾಚಾರ್ಯಕೃತ ವ್ಯಾಖ್ಯಾನ ಎಂಬ ನಾಲ್ಕು ವ್ಯಾಖ್ಯಾನಗಳನ್ನು ಸಂಗ್ರಹಿಸಿ ತಂತ್ರಸಾರಸಂಗ್ರವನ್ನು ಪ್ರಕೃತ ಸಂಪಾದಿಸಲಾಗಿದೆ. ಇದರಲ್ಲಿ ಛಲಾರಿ, ತತ್ತ್ವಕಣಿಕಾ, ಗುರ್ವರ್ಥದೀಧಿತಿ ವ್ಯಾಖ್ಯಾನಗಳು ಪೂರ್ವದಲ್ಲಿಯೇ ಮುದ್ರಿತವಾಗಿವೆ. ಮಂಕಾಲಿ ಆಚಾರ್ಯರ ವ್ಯಾಖ್ಯಾನವು ಮುದ್ರಿತವಾಗಿಲ್ಲ. ಅದನ್ನೂ ಸಹ ಈ ಕೃತಿಯಲ್ಲಿ ಸೇರಿಸಲಾಗಿದೆ.

**ಛಲಾರಿ ಶೇಷಾಚಾರ್ಯರು**

ತಂತ್ರಸಾರಸಂಗ್ರಹಕ್ಕೆ ಸಮಾರು 20ಕ್ಕಿಂತಲೂ ಮಿಗಿಲಾದ ವ್ಯಾಖ್ಯಾನಗಳು ಉಪಲಬ್ಧವಿದ್ದರೂ ಸಹ ಪಾಠ ಪ್ರವಚನ ಪರಂಪರೆಯಲ್ಲಿ ಬಂದ ವ್ಯಾಖ್ಯಾನ ಛಲಾರೀ ಶೇಷಾಚಾರ್ಯರ ವ್ಯಾಖ್ಯಾನ. ಇದು ಇವರ ಹಿರಿಮೆ.

ಛಲಾರಿ ಆಚಾರ್ಯರ ಮನೆತನ ದ್ವೈತವಾಙ್ಮಯಕ್ಕೆ ನೀಡಿದ ಕೊಡುಗೆ ಅಪಾರ. ಇವರಲ್ಲಿ ಛಲಾರಿ ನಾರಾಯಣಾಚಾರ್ಯರು ಪ್ರಾಚೀನರು. ಇವರು ಭಾಗವತತಾತ್ಪರ್ಯಕ್ಕೆ ಪ್ರಬೋಧಿನೀ ಎಂಬ ವ್ಯಾಖ್ಯಾನವನ್ನು ರಚಿಸಿ ಅಪೂರ್ವಪ್ರಮೇಯಗಳನ್ನು ತಿಳಿಸಿರುವರು. ಧರ್ಮಶಾಸ್ತ್ರಕ್ಕೆ ಸಂಬಂಧಪಟ್ಟ 'ಸ್ಮೃತಿಸಂಗ್ರಹ' ಇವರದ್ದೇ ಇನ್ನೊಂದು ಅಪೂರ್ವಕೃತಿಯಾಗಿದೆ. ಛಲಾರಿ ನಾರಾಯಣಾಚಾರ್ಯರ ಪುತ್ರರು ಛಲಾರಿ ನರಸಿಂಹಾಚಾರ್ಯರು. ಇವರು ಅನೇಕ ಅಪೂರ್ವವ್ಯಾಖ್ಯಾನಗಳನ್ನು ರಚಿಸಿರುವರು. ಋಗ್ಭಾಷ್ಯಟೀಕಾಟಿಪ್ಪಣಿ, ತತ್ತ್ವಸಂಖ್ಯಾನಟೀಕಾಟಿಪ್ಪಣೀ, ಕರ್ಮನಿರ್ಣಯಟೀಕಾವ್ಯಾಖ್ಯಾನ, ಪಾರಿಜಾತಹರಣಟೀಕಾ, ಆಶ್ವಲಾಯನಗೃಹ್ಯಸೂತ್ರವ್ಯಾಖ್ಯಾನ, ಸ್ಮೃತ್ಯರ್ಥಸಾಗರ, ಶಾಬ್ದಿಕ ಕಂಠಮಣಿ, ಮತ್ತು ಅದರ ಟೀಕೆ ಶಾಬ್ದಿಕಕಂಠಮಣಿಭೂಷಣ ಇವು ಅವರ ಕೃತಿಗಳಾಗಿವೆ.

ತುಷ್ಟಿಕ್ಕಿಂತಲೂ ಸ್ವಾಧ್ಯಾಯವು ಕೋಟಿಪಟ್ಟು ಮಿಗಿಲಾಗಿ ಧರ್ಮಸಾಧನವಾಗಿದೆ. ಸ್ವಾಧ್ಯಾಯಕ್ಕಿಂಲೂ ತಂತ್ರಸಾರೋಕ್ತ ಶ್ರೀಹರಿಪೂಜೆಯು ಅಸಂಖ್ಯಗುಣಗಳಿಂದ ಹೆಚ್ಚಾಗಿ ಧರ್ಮಸಾಧನವಾಗಿದೆ. ಶ್ರೀಹರಿಯ ಪೂಜೆಗಿಂತಲೂ ಧ್ಯಾನವು ಮೂರು ಪಟ್ಟು ಹೆಚ್ಚು ಧರ್ಮಸಾಧನವಾಗಿದೆ. ಧ್ಯಾನಕ್ಕಿಂತಲೂ ಸ್ವಯಂ ತಾನು ಮಾಡುವ ಶಾಸ್ತ್ರಚಿಂತನೆಯು ಹತ್ತು ಪಟ್ಟು ಪುಣ್ಯಸಾಧಕವಾಗಿದೆ. ಶಾಸ್ತ್ರಚಿಂತನಕ್ಕಿಂತಲೂ ಮಿಗಿಲಾಗಿ ಒಬ್ಬ ಶಿಷ್ಯನಿಗೆ ಪಾಠಹೇಳುವುದು ನೂರು ಪಟ್ಟು ಅಧಿಕವಾಗಿ ಧರ್ಮಸಾಧನವಾಗಿದೆ. ಆದ್ದರಿಂದಲೇ 'ತದ್ಧಿತಪಸ್ತದ್ಧಿ ತಪಃ' ಎಂದು ಉಪನಿಷತ್ತು ಸಾರಿದೆ. ಇದು ಧರ್ಮಸಾಧನಗಳಲ್ಲಿರುವ ತಾರತಮ್ಯಕ್ರಮ. ಇದಕ್ಕನುಗುಣವಾಗಿ ಧರ್ಮಗಳ ಸಂಪಾದನೆಯನ್ನು ಮಾಡಬೇಕು.

ಆಚಾರ್ಯರು ಅಧಿಕಾರಿಯು ಅತ್ಯಂತ ಅವಶ್ಯವಾಗಿ ಅನುಷ್ಠಾನಿಸಬೇಕಾದ ಅನೇಕವಿಷಯ ಗಳನ್ನು ತಂತ್ರಸಾರಸಂಗ್ರಹದಲ್ಲಿ ನಿರೂಪಿಸಿದ್ದಾರೆ. ಕೇವಲ ಇಲ್ಲಿ ಸ್ಥಾಲಿಪುಲಾಕನ್ಯಾಯೇನ ಕೆಲವು ವಿಷಯಗಳನ್ನು ನಿರೂಪಿಸಲಾಗಿದೆ.

**ತಂತ್ರಸಾರ ಸಂಗ್ರಹ ವ್ಯಾಖ್ಯಾನಗಳು**

ಈ ತಂತ್ರಸಾರಸಂಗ್ರಹಕ್ಕೆ ಅನೇಕ ಮಹನೀಯರು ವ್ಯಾಖ್ಯಾನವನ್ನು ಮಾಡಿರುವರು. ಅವರೆಲ್ಲರೂ ಸಹ ಅಪೂರ್ವವಾದ ಪಂಚರಾತ್ರಾದಿಪ್ರಮೇಯಗಳನ್ನು ತಿಳಿಸಿರುವರು. ಆ ವ್ಯಾಖ್ಯಾನಗಳಲ್ಲಿ ಕೆಲವು ಉಪಲಬ್ಧವಾಗಿವೆ. ಕೆಲವು ಉಪಲಬ್ಧವಿಲ್ಲ. ಉಪಲಬ್ಧವಾದವುಗಳಲ್ಲಿ ಕೆಲವು ಮುದ್ರಿತವೂ ಆಗಿವೆ. ಈ ವ್ಯಾಖ್ಯಾನಗಳ ಪಟ್ಟಿಯನ್ನು ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರು ತಮ್ಮ ಛಲಾರೀ ವ್ಯಾಖ್ಯಾನಸಹಿತ ತಂತ್ರಸಾರಸಂಗ್ರಹ ಪುಸ್ತಕದ ಮುನ್ನುಡಿಯಲ್ಲಿ ನೀಡಿರುವರು.

1) ವ್ಯಾಸತೀರ್ಥಕೃತ ಟೀಕಾ

2) ವಾದಿರಾಜಕೃತಟೀಕಾ

3) ವೇದವೇದ್ಯಕೃತಟೀಕಾ

4) ಛಲಾರೀ ನರಸಿಂಹಾಚಾರ್ಯಕೃತ ಟೀಕಾ

5) ಛಲಾರೀ ಶೇಷಾಚಾರ್ಯಕೃತಃ- ತಂತ್ರಸಾರಾರ್ಥಸಂಗ್ರಹಃ

6) ಬಿದರಹಳ್ಳಿ ವೇಕಂಟಪತ್ಯಾಚಾರ್ಯಕೃತಟೀಕಾ- ಗುರ್ವರ್ಥದೀಧಿತಿಃ

7) ತಾತ್ಪರ್ಯನಿರ್ಣಯಟಿಪ್ಪಣೀಕರ್ತೃ ಜನಾರ್ಧನಭಟ್ಟಪುತ್ರ ವೇದವ್ಯಾಸಾಚಾರ್ಯಕೃತ ಪದಭಾವಪ್ರಭೋಧಿನೀ

8) ವಿದ್ಯಾಧೀಶತೀರ್ಥಶಿಷ್ಯ ನೃಸಿಂಹಭಿಕ್ಷುಕೃತಟೀಕಾ

9) ತಾಮ್ರಪರ್ಣಿ ಆನಂದತೀರ್ಥಾಚಾರ್ಯಕೃತಟೀಕಾ- ತಂತ್ರರತ್ನಪ್ರಕಾಶಿಕಾ

10) ತಾಮ್ರಪರ್ಣಿ ಶ್ರೀನಿವಾಸಾಚಾರ್ಯಕೃತಟೀಕಾ- ತಂತ್ರರತ್ನಾವಳೀ

11) ಬಿದರಹಳ್ಳಿ ಶ್ರೀನಿವಾಸತೀರ್ಥಕೃತಟೀಕಾ

12) ರಘುನಾಥತೀರ್ಥಕೃತಟೀಕಾ- ತತ್ವಕಣಿಕಾ

13) ಛಲಾರೀ ರಾಮದಾಸಾಚಾರ್ಯಕೃತಟೀಕಾ- ತಂತ್ರಸಾರಸಂಗ್ರಹಭಾವಚಂದ್ರಿಕಾ

14) ವಾಸುದೇವಾಚಾರ್ಯಶಿಷ್ಯ ಆನಂದಾಚಾರ್ಯಪುತ್ರ ಅನಂತಾಚಾರ್ಯಸುತವೇಂಕಟ-ನರಸಿಂಹಾಚಾರ್ಯಕೃತಟೀಕಾ- ತಂತ್ರಸಾರವಿವೃತಿಃ

15) ವಸುಧೇಂದ್ರತೀರ್ಥಕೃತಟೀಕಾ

16) ಮಂಕಾಲೀ ಧರ್ಮಾಚಾರ್ಯಕೃತಟೀಕಾ

17) ಸತ್ಯಪ್ರಿಯತೀರ್ಥಶಿಷ್ಯ ಯಾಡಿಕೀ ನರಸಿಂಹಾಚಾರ್ಯಕೃತಟೀಕಾ

18) ರೋಟ್ಟಿ ವೇಂಕಟಾದ್ರಿಭಟ್ಟಕೃತಟೀಕಾ

19) ಪೂರ್ಣಬೋಧಾಚಾರ್ಯಶಿಷ್ಯವಾಸುದೇವಕೃತಟೀಕಾ- ತಂತ್ರಸಾರಾರ್ಥಚಂದ್ರಿಕಾ

20) ಶ್ರೀಮುಷ್ಣಂ ಸುಬ್ಬಾಚಾರ್ಯಕೃತಟೀಕಾ

21) ಜನಾರ್ದನಭಟ್ಟಸುತ ತಮ್ಮಣ್ಣಾಚಾರ್ಯಕೃತಟೀಕಾ- ತಂತ್ರಸಾರಭಾವಬೋಧಿನೀ

22) ಗಂಗೋದಕಮಿಶ್ರಕೃತಟೀಕಾ

23) ವೇದವೇದ್ಯತೀರ್ಥಶಿಷ್ಯಕೃತಟೀಕಾ

24) ತಂತ್ರಸಾರಸಂಗ್ರಹವಿವೃತಿಃ - ಗೂಢಕರ್ತೃಕಾ

ಛಲಾರಿ ಶೇಷಾಚಾರ್ಯಕೃತ ತಂತ್ರಸಾರಾರ್ಥಸಂಗ್ರಹ, ಶ್ರೀರಘುನಾಥತೀರ್ಥರ ತತ್ವಕಣಿಕಾ ವ್ಯಾಖ್ಯಾನ, ವೇಂಕಟಪತ್ಯಾಚಾರ್ಯರ ಗುರ್ವರ್ಥದೀಧಿತಿ, ಮಂಕಾಲಿ ಧರ್ಮಾಚಾರ್ಯಕೃತ ವ್ಯಾಖ್ಯಾನ ಎಂಬ ನಾಲ್ಕು ವ್ಯಾಖ್ಯಾನಗಳನ್ನು ಸಂಗ್ರಹಿಸಿ ತಂತ್ರಸಾರಸಂಗ್ರವನ್ನು ಪ್ರಕೃತ ಸಂಪಾದಿಸಲಾಗಿದೆ. ಇದರಲ್ಲಿ ಛಲಾರಿ, ತತ್ವಕಣಿಕಾ, ಗುರ್ವರ್ಥದೀಧಿತಿ ವ್ಯಾಖ್ಯಾನಗಳು ಪೂರ್ವದಲ್ಲಿಯೇ ಮುದ್ರಿತವಾಗಿವೆ. ಮಂಕಾಲಿ ಆಚಾರ್ಯರ ವ್ಯಾಖ್ಯಾನವು ಮುದ್ರಿತವಾಗಿಲ್ಲ. ಅದನ್ನೂ ಸಹ ಈ ಕೃತಿಯಲ್ಲಿ ಸೇರಿಸಲಾಗಿದೆ.

**ಛಲಾರಿ ಶೇಷಾಚಾರ್ಯರು**

ತಂತ್ರಸಾರಸಂಗ್ರಹಕ್ಕೆ ಸಮಾರು 20ಕ್ಕಿಂತಲೂ ಮಿಗಿಲಾದ ವ್ಯಾಖ್ಯಾನಗಳು ಉಪಲಬ್ಧವಿದ್ದರೂ ಸಹ ಪಾಠ ಪ್ರವಚನ ಪರಂಪರೆಯಲ್ಲಿ ಬಂದ ವ್ಯಾಖ್ಯಾನ ಛಲಾರೀ ಶೇಷಾಚಾರ್ಯರ ವ್ಯಾಖ್ಯಾನ. ಇದು ಇವರ ಹಿರಿಮೆ.

ಛಲಾರಿ ಆಚಾರ್ಯರ ಮನೆತನ ದ್ವೈತವಾಙ್ಮಯಕ್ಕೆ ನೀಡಿದ ಕೊಡುಗೆ ಅಪಾರ. ಇವರಲ್ಲಿ ಛಲಾರಿ ನಾರಾಯಣಾಚಾರ್ಯರು ಪ್ರಾಚೀನರು. ಇವರು ಭಾಗವತತಾತ್ಪರ್ಯಕ್ಕೆ ಪ್ರಬೋಧಿನೀ ಎಂಬ ವ್ಯಾಖ್ಯಾನವನ್ನು ರಚಿಸಿ ಅಪೂರ್ವಪ್ರಮೇಯಗಳನ್ನು ತಿಳಿಸಿರುವರು. ಧರ್ಮಶಾಸ್ತ್ರಕ್ಕೆ ಸಂಬಂಧಪಟ್ಟ 'ಸ್ಮೃತಿಸಂಗ್ರಹ' ಇವರದ್ದೇ ಇನ್ನೊಂದು ಅಪೂರ್ವಕೃತಿಯಾಗಿದೆ. ಛಲಾರಿ ನಾರಾಯಣಾಚಾರ್ಯರ ಪುತ್ರರು ಛಲಾರಿ ನರಸಿಂಹಾಚಾರ್ಯರು. ಇವರು ಅನೇಕ ಅಪೂರ್ವವ್ಯಾಖ್ಯಾನಗಳನ್ನು ರಚಿಸಿರುವರು. ಋಗ್ಭಾಷ್ಯಟೀಕಾಟಿಪ್ಪಣಿ, ತತ್ತ್ವಸಂಖ್ಯಾನಟೀಕಾಟಿಪ್ಪಣೀ, ಕರ್ಮನಿರ್ಣಯಟೀಕಾವ್ಯಾಖ್ಯಾನ, ಪಾರಿಜಾತಹರಣಟೀಕಾ, ಆಶ್ವಲಾಯನಗೃಹ್ಯಸೂತ್ರವ್ಯಾಖ್ಯಾನ, ಸ್ಮೃತ್ಯರ್ಥಸಾಗರ, ಶಾಬ್ದಿಕ ಕಂಠಮಣಿ, ಮತ್ತು ಅದರ ಟೀಕೆ ಶಾಬ್ದಿಕಕಂಠಮಣಿಭೂಷಣ ಇವು ಅವರ ಕೃತಿಗಳಾಗಿವೆ.

ಭಲಾರಿ ಶೇಷಾಚಾರ್ಯರು ನರಸಿಂಹಾಚಾರ್ಯರ ಶಿಷ್ಯರಲ್ಲಿ ಅಗ್ರೇಸರರು. ಉತ್ತರಾದಿ ಮಠಾಧೀಶರಾದ ಶ್ರೀಸತ್ಯನಿಧಿತೀರ್ಥರೂ ಸಹ ಇವರಿಗೆ ಗುರುಗಳು. ನಿವೃತ್ತಿಸಂಗಮದ ನಿವಾಸಿಗಳಾದ ಧರ್ಮಪುರಿ ಪುರುಷೋತ್ತಮಾಚಾರ್ಯರು ಇವರ ತಂದೆ. ಪ್ರಾಯಃ ಇವರ ಕಾಲ ಕ್ರಿ.ಶ. 1670ರ ನಂತರ ಇರಬಹುದು. ಜಯತೀರ್ಥವಿಜಯವನ್ನು ಬರೆದ ಭಲಾರಿ ಸಂಕರ್ಷಣಾಚಾರ್ಯರು ಮತ್ತು ಮಣಿಮಂಜರಿಗೆ ಟೀಕೆಯನ್ನು ಬರೆದ ಭಲಾರಿ ಸುಬ್ರಹ್ಮಣ್ಯಾಚಾರ್ಯರು ಇವರ ಮಕ್ಕಳು. ಭಲಾರಿ ಶೇಷಾಚಾರ್ಯರು 20ಕ್ಕಿಂತಲೂ ಮಿಗಿಲಾದ ಗ್ರಂಥಗಳನ್ನು ರಚಿಸಿರುವರು. ಇವುಗಳಲ್ಲಿ ತಂತ್ರಸಾರ ಸಂಗ್ರಹವ್ಯಾಖ್ಯಾನ ಮತ್ತು ಸುಮಧ್ವವಿಜಯವ್ಯಾಖ್ಯಾನ ಪಾಠಪರಂಪರೆಯಲ್ಲಿ ಬಂದುವುಗಳು ಎಂಬುದು ಗಮನಾರ್ಹವಾದ ವಿಷಯ. ಸುಮಧ್ವವಿಜಯವ್ಯಾಖ್ಯಾನವು ಹೆಸರಿಗೆ ತಕ್ಕಂತೆ ಮಂದೋಪಕಾರಣಿಯಾಗಿದೆ.

(ಈ ವಿಷಯಗಳನ್ನು ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರು ತಮ್ಮ ತಂತ್ರಸಾರಸಂಗ್ರಹ ಗ್ರಂಥದ ಮುನ್ನುಡಿಯಲ್ಲಿ ಬರೆದಿರುವರು)

ಪ್ರಕೃತ ಭಲಾರಿ ಆಚಾರ್ಯರ ತಂತ್ರಸಾರಸಂಗ್ರಹವ್ಯಾಖ್ಯಾನವು ಅನೇಕ ಅಪೂರ್ವವಿಷಯಗಳಿಗೆ ಬೆಳಕನ್ನು ಚೆಲ್ಲುತ್ತದೆ. ಅನೇಕ ತಂತ್ರಗ್ರಂಥಗಳನ್ನು ಭಲಾರಿ ಆಚಾರ್ಯರು ಉಲ್ಲೇಖಿಸಿದ್ದಾರೆ. ಶಾರದಾತಿಲಕ, ತಂತ್ರತಿಲಕ, ಗ್ರಂಥಗಳೊಂದಿಗೆ ಮಾಧವಸ್ಮೃತಿ ಅಥವಾ ಮಾಧವತೀರ್ಥಸ್ಮೃತಿ ಎಂಬ ಸ್ಮೃತಿಗ್ರಂಥಗಳನ್ನು ಉಲ್ಲೇಖಿಸುತ್ತಾರೆ.

ಈ ವ್ಯಾಖ್ಯಾನವು 1991ರಲ್ಲಿ ರಾಮತತ್ವಪ್ರಕಾಶ ಬೆಳಗಾವಿಯಿಂದ ಮುದ್ರಿತವಾಗಿತ್ತು. ಪುನಃ 1997ರಲ್ಲಿ ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರ ಸಂಪಾದನೆಯಲ್ಲಿ ಭಂಡಾರಕೇರೆ ಮಠ ಉಡುಪಿಯಿಂದ ಮುದ್ರಣಗೊಂಡಿದೆ. ಪ್ರಕೃತ ಆ ಯಾವ ಪ್ರತಿಗಳು ಉಪಲಬ್ಧವಿಲ್ಲದಿರುವದರಿಂದ ಪುನಃ ಮುದ್ರಿಸಲಾಗಿದೆ. ಈ ವ್ಯಾಖ್ಯಾನದ ಶುದ್ಧಿಗೆ ಪೂರ್ವದಲ್ಲಿ ಮುದ್ರಿತವಾದ ಗ್ರಂಥಗಳೊಡನೆ ಪ್ರೊ. ಕೆ.ಟಿ.ಪಾಂಡುರಂಗಿ ಅವರಿಂದ ಸ್ಥಾಪಿತವಾದ ದ್ವೈತವೇದಾಂತ ಅಧ್ಯಯನ ಮತ್ತು ಸಂಶೋಧನ ಕೇಂದ್ರದಲ್ಲಿರುವ ಹಸ್ತಪ್ರತಿಯು ಉಪಯುಕ್ತವಾಯಿತು. ಕೆಲವು ಸ್ಥಳಗಳಲ್ಲಿ ಮಂಕಾಲಿ ಧರ್ಮಾಚಾರ್ಯರ ವ್ಯಾಖ್ಯಾನದಿಂದಲೂ ಈ ವ್ಯಾಖ್ಯಾನವನ್ನು ಶುದ್ಧಿಗೊಳಿಸಲಾಗಿದೆ.

**ಶ್ರೀರಘುನಾಥತೀರ್ಥರು (ಕ್ರಿ.ಶ. 1700-1755)**

ಶ್ರೀರಘುನಾಥತೀರ್ಥರು ವ್ಯಾಸರಾಜಮಠವನ್ನು ಅಲಂಕರಿಸಿದ ಜ್ಞಾನಿವರೇಣ್ಯರು. ಶ್ರೀವ್ಯಾಸರಾಜರ 'ದಶಮೋ ಮತ್ಸಮೋ ಭವೇತ್' ಎಂಬ ಭವಿಷ್ಯವಾಣಿಯನ್ನು ನಿಜಗೊಳಿಸಿದ ಶ್ರೀರಘುನಾಥತೀರ್ಥರು ವ್ಯಾಸರಾಜರ ತಾತ್ಪರ್ಯಚಂದ್ರಿಕಾ ಗ್ರಂಥವನ್ನು ಪೂರ್ಣಗೊಳಿಸಿದ ಮಹನೀಯರು. 'ಶೇಷಚಂದ್ರಿಕಾಚಾರ್ಯ' ಎಂದೇ ವಿಖ್ಯಾತರಾದವರು. ಶ್ರೀವ್ಯಾಸರಾಜರ ಶೈಲಿಯನ್ನೇ ಅನುಸರಿಸಿ ಶ್ರೀರಘುನಾಥತೀರ್ಥರು ಶೇಷತಾತ್ಪರ್ಯಚಂದ್ರಿಕಾವನ್ನು ಬರೆದಿರುವರು. ವ್ಯಾಖ್ಯಾನಶೈಲಿಯು ಬಹು ಗಂಭೀರ ಅರ್ಥಗರ್ಭಿತ. ವ್ಯಾಸರಾಜರ ಶೈಲಿಯನ್ನು ಅನುಸರಿಸಿ ಅನುವ್ಯಾಖ್ಯಾನ, ನ್ಯಾಯವಿವರಣ ಇತ್ಯಾದಿ ಸೂತ್ರಪ್ರಸ್ಥಾನಕ್ಕೆ ಸಂಬಂಧಪಟ್ಟ ಗ್ರಂಥಗಳಿಗೂ, ಬ್ರಹ್ಮಸೂತ್ರಭಾಷ್ಯಕ್ಕೂ

ಇರುವ ನಿಕಟ ಸಂಬಂಧವನ್ನು ಎತ್ತಿ ತೋರಿಸಿದ್ದಾರೆ. ತತ್ತ್ವಪ್ರಕಾಶಿಕಾ ವಿವರಣವನ್ನು ಮಾಡುವದರ ಜೊತೆಗೆ ಅದ್ವೈತ-ವಿಶಿಷ್ಟಾದ್ವೈತ ಭಾಷ್ಯಗಳನ್ನು ಪ್ರತಿಯೊಂದು ಅಧಿಕರಣದಲ್ಲಿ ಉದಾಹರಿಸಿ ತೀಕ್ಷ್ಣವಾಗಿ ಶ್ರೀವ್ಯಾಸರಾಜರಂತೆ ವಿಮರ್ಶಿಸಿದ್ದಾರೆ. ಶೇಷತಾತ್ಪರ್ಯಚಂದ್ರಿಕಾಗ್ರಂಥದಲ್ಲಿ ಶ್ರೀರಘುನಾಥತೀರ್ಥರ ನ್ಯಾಯ-ವೇದಾಂತ-ಮೀಮಾಂಸಾದಿ ಶಾಸ್ತ್ರದ ಆಳವಾದ ಪಾಂಡಿತ್ಯದ ಅರಿವಾದಂತೆ ತಂತ್ರಸಾರವ್ಯಾಖ್ಯಾನವಾದ ತತ್ವಕಣಿಕಾದಲ್ಲಿ ಅವರ ತಂತ್ರಶಾಸ್ತ್ರಕ್ಕೆ ಸಂಬಂಧಪಟ್ಟ ಪಾಂಡಿತ್ಯದ ಇನ್ನೊಂದು ಮುಖದ ಅರಿವಾಗುತ್ತದೆ. ತತ್ವಕಣಿಕಾ ವ್ಯಾಖ್ಯಾನದಲ್ಲಿ ಅನೇಕ ಅಪೂರ್ವ ಪಂಚರಾತ್ರಗ್ರಂಥಗಳನ್ನು ಉದಾಹರಿಸುತ್ತಾರೆ. ಈಗ ಉಪಲಬ್ಧವಾದ ತಂತ್ರಸಾರಸಂಗ್ರಹ ವ್ಯಾಖ್ಯಾನಗಳಲ್ಲಿಯೇ ವಿಸ್ತೃತವಾದ ವ್ಯಾಖ್ಯಾನ ಶ್ರೀರಘುನಾಥತೀರ್ಥರ ತತ್ವಕಣಿಕಾ. ವೈಷ್ಣವತಂತ್ರಕ್ಕೆ ವಿರುದ್ಧವಾದ ಅನೇಕ ತಂತ್ರಗಳನ್ನು ಉದಾಹರಿಸಿ ಅವುಗಳನ್ನು ದೂಷಿಸುತ್ತಾರೆ. ಆಚಾರ್ಯರ 'ಚ' 'ತು' ಮುಂತಾದ ಪದಗಳಿಂದ ಸೂಚಿತವಾದ ಅನೇಕ ಪ್ರಮೇಯಗಳನ್ನು ಪಂಚರಾತ್ರವನ್ನು ಉದಾಹರಿಸಿ ಉಪಪಾದಿಸಿದ್ದಾರೆ. ಇದರಿಂದ ಅವರಿಗಿರುವ ತಂತ್ರಶಾಸ್ತ್ರದ ಪ್ರಭುತ್ವದ ಅರಿವಾಗುತ್ತದೆ. ತಂತ್ರಸಾರಸಂಗ್ರಹದ ವ್ಯಾಖ್ಯಾನವಾದ ತತ್ವಕಣಿಕಾ ಅಲ್ಲದೆ, ಕರ್ಮನಿರ್ಣಯಟೀಕಾವ್ಯಾಖ್ಯಾನ, ಬೃಹತೀಸಹಸ್ರದ ವ್ಯಾಖ್ಯಾನ, ಈಶಾವಾಸ್ಯೋಪನಿಷದ್ಭಾಷ್ಯಟೀಕಾ ವ್ಯಾಖ್ಯಾನವಾದ ಪದಾರ್ಥ ವಿವೇಕ ಇವು ಶ್ರೀರಘುನಾಥತೀರ್ಥರ ಇತರ ಕೃತಿಗಳಾಗಿವೆ. ಈ ತತ್ವಕಣಿಕಾ ವ್ಯಾಖ್ಯಾನವು ಛಲಾರಿ ಆಚಾರ್ಯರ ಮತ್ತು ವೇಂಕಟಪತ್ಯಾಚಾರ್ಯರ ವ್ಯಾಖ್ಯಾನಕ್ಕಿಂತಲೂ ಅರ್ವಾಚೀನವಾದ ವ್ಯಾಖ್ಯಾನವಾಗಿದೆ.

ಈ ತತ್ವಕಣಿಕಾ ವ್ಯಾಖ್ಯಾನವನ್ನು ಪ್ರಥಮತಃ ಶ್ರೀವ್ಯಾಸರಾಜಮಠದಿಂದ 1996ರಲ್ಲಿ ಪ್ರಸ್ತುತ ವ್ಯಾಸರಾಜಮಠದ ಪೀಠಾಧಿಪತಿಗಳಾದ ಶ್ರೀ ಶ್ರೀ ವಿದ್ಯಾಶ್ರೀಶತೀರ್ಥರು ಪೂರ್ವಾಶ್ರಮದಲ್ಲಿ (ಡಾ. ಡಿ. ಪ್ರಹ್ಲಾದಾಚಾರ್ಯರು) ಅನೇಕ ಹಸ್ತಪ್ರತಿಗಳನ್ನು ಸಂಗ್ರಹಸಿ ಶುದ್ಧವಾದ ಪಾಠವನ್ನು ಸಂಪಾದಿಸಿರುವರು. ಆ ಪುಸ್ತಕವೂ ಸಹ ಇಂದಿಗೆ ಅನುಲಬ್ಧವಾದ್ದರಿಂದ ಆ ತತ್ತ್ವಕಣಿಕಾ ವ್ಯಾಖ್ಯಾನವನ್ನು ಈ ಕೃತಿಯಲ್ಲಿ ಸೇರಿಸಲಾಗಿದೆ.

**ಬಿದರಹಳ್ಳಿ ವೇಂಕಟಪತ್ಯಾಚಾರ್ಯರು**

ಮಾಧ್ವವಾಙ್ಮಯ ಟಿಪ್ಪಣೀಕಾರರಲ್ಲಿ ಶ್ರೀನಿವಾಸತೀರ್ಥರ ಕೊಡುಗೆ ಅಪಾರ ಅಸದೃಶ. ಶ್ರೀರಘೂತ್ತಮತೀರ್ಥರು ಹಾಕಿ ಕೊಟ್ಟ ವ್ಯಾಖ್ಯಾನಶೈಲಿಯನ್ನು ಮುಂದುವರೆಸಿದ ಮಹನೀಯರು. ಯಾದವಾರ್ಯರ ಶಿಷ್ಯರಲ್ಲಿ ಹಿರಿಯರು. ಶ್ರೀನಿವಾಸತೀರ್ಥರು ಸುಮಾರು 40ಗ್ರಂಥಗಳನ್ನು ರಚಿಸಿ ವ್ಯಾಖ್ಯಾನಪರಂಪರೆಯಲ್ಲಿ ತಮ್ಮ ಹಿರಿಮೆಯನ್ನು ತೋರಿದವರು. ನ್ಯಾಯಾಮೃತವನ್ನು ಓದುವ ವಿದ್ಯಾರ್ಥಿಗಳಿಗೆ ಇಂದಿಗೂ ಸಹ ಶ್ರೀನಿವಾಸತೀರ್ಥರ ವ್ಯಾಖ್ಯಾನವೇ ಗತಿ. ಸರಳ ಶೈಲಿಯಿಂದ ಭಾವವನ್ನು ತಿಳಿಸುವುದು ಇವರ ಶೈಲಿ. ಶ್ರೀನಿವಾಸತೀರ್ಥರ ಮಕ್ಕಳೆ ವೇಂಕಟಪತ್ಯಾಚಾರ್ಯರು. ಪ್ರಾಯಃ ಇವರ ಕಾಲ ಕ್ರಿ.ಶ. 1610-1700.

ಇವರು ತಮ್ಮ ತಂದೆಯಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡುತ್ತ ಪ್ರಾರಂಭದಲ್ಲಿ ಗದಗಜಿಲ್ಲೆಯ

ಬಿದರಹಳ್ಳಿಯಲ್ಲಿ ವಾಸವಾಗಿದ್ದರು. ನಂತರ ಕೆಲವು ಕಾಲ ಹರಿಹರದಲ್ಲಿ ನಂತರ ಶಿವಮೊಗ್ಗಜಿಲ್ಲೆಯ ರಟ್ಟಿಹಳ್ಳಿಗ್ರಾಮದಲ್ಲಿ ವಾಸವಾಗಿದ್ದು ಪಾಠ-ಗ್ರಂಥವ್ಯಾಖ್ಯಾನವನ್ನು ಮಾಡುತ್ತಿದ್ದರು. ತಂದೆಯಂತೆ ಇವರೂ ಸಹ ವ್ಯಾಪಕವಾಗಿ ಅಧ್ಯಯನಮಾಡಿ ಸರಳ ಶೈಲಿಯಿಂದ ಗ್ರಂಥವನ್ನು ರಚಿಸಿರುವರು. ಮಹಾತಪಸ್ವಿಗಳು, ಅನುಷ್ಠಾನತತ್ಪರರೂ ಆಗಿದ್ದರು. ಅವರ ತಪಸ್ಸಿಗೆ ಮೆಚ್ಚಿ ತಿರುಪತಿಯಲ್ಲಿ ಶ್ರೀನಿವಾಸದೇವರು ಮೊಸರು ಬುತ್ತಿಯಲ್ಲಿ ಒಲಿದನು. ಇಂದಿಗೂ ಸಹ ಅವರ ಮನೆತನದಲ್ಲಿ ಆ ಬೆಳ್ಳಿಯ ಶ್ರೀನಿವಾಸನ ಪ್ರತಿಮೆಯು 'ಬುತ್ತಿ ಶ್ರೀನಿವಾಸ' ಎಂದು ಪೂಜೆ ಗೊಳ್ಳುತ್ತಿರುವನು.

ಇವರು ತಂತ್ರಸಾರಕ್ಕೆ ರಚಿಸಿದ ವ್ಯಾಖ್ಯಾನ 'ಗುರ್ವರ್ಥದೀಧಿತಿ'. ಪ್ರಾಚೀನವ್ಯಾಖ್ಯಾನಗಳನ್ನು ವಿಮರ್ಶಿಸಿ ಬರೆದ ವ್ಯಾಖ್ಯಾನ. ಅನೇಕಸ್ಥಳಗಳಲ್ಲಿ ಪಾಠವನ್ನು ಸಂಶೋಧಿಸಿ ಉಲ್ಲೇಖಿಸುತ್ತಾರೆ. ಸಂಪ್ರದಾಯ ಗುರುಪರಂಪರೆಯಿಂದ ಬಂದ ಪದ್ಧತಿಯನ್ನು ತಿಳಿಸುತ್ತಾರೆ. ಅನೇಕ ಪ್ರಾಚೀನರ ಕೃತಿಗಳನ್ನು ಉದಾಹರಿಸುತ್ತಾರೆ. ತಂತ್ರಸಾರಸಂಗ್ರಹದಲ್ಲಿ ಆಚಾರ್ಯರು ಉದ್ಧರಿಸಿದ ಎಲ್ಲ ವಿಷ್ಣು-ವೈಷ್ಣವ ಮಂತ್ರಗಳಿಗೆ ವ್ಯಾಖ್ಯಾನಸಿರುವುದು ಈ ವೇಕಂಟಪತ್ಯಾಚಾರ್ಯರ ವ್ಯಾಖ್ಯಾನದ ವಿಶೇಷ. ಎಲ್ಲ ವೇದಮಂತ್ರಗಳಿಗೂ ವಿಷದವಾದ ವ್ಯಾಖ್ಯಾನವನ್ನು ಗುರ್ವರ್ಥದೀಧಿತಿಯಲ್ಲಿ ನಾವು ಕಾಣುತ್ತೇವೆ.

ಒಟ್ಟು ಇವರ ಕೃತಿಗಳು ಐದು.

1) ಗುರ್ವರ್ಥದೀಧಿತಿ (ತಂತ್ರಸಾರಸಂಗ್ರಹವ್ಯಾಖ್ಯಾನ)

2) ಸೂತ್ರಾರ್ಥಸಂಗ್ರಹ (ಬ್ರಹ್ಮಸೂತ್ರಗಳಿಗೆ ನೇರವಾದ ವ್ಯಾಖ್ಯಾನ)

3) ತಾರತಮ್ಯನವಶ್ಲೋಕೀವ್ಯಾಖ್ಯಾ ಭಾವದೀಪಿಕಾ

4) ನಖಸ್ತುತಿವ್ಯಾಖ್ಯಾ

5) ಶ್ರೀಶ್ರೀನಿವಾಸಸ್ತುತಿ

ಈ ಗುರ್ವರ್ಥದೀಧಿತಿವ್ಯಾಖ್ಯಾನವನ್ನು ಈ ಪೂರ್ವದಲ್ಲಿ ಡಾ. ತಿರುಮಲಾಚಾರ್ಯ ಕುಲಕರ್ಣಿಯವರು ಸಂಶೋಧಿಸಿ ವಿದ್ಯಾವಾರಿಧಿ (ಪಿ.ಹೇಚ್.ಡಿ) ಪದವಿಯನ್ನು ಪಡೆದಿರುತ್ತಾರೆ. ಶುದ್ಧವಾದ ಪಾಠದಿಂದ ಕೂಡಿದ ಈ ಪುಸ್ತಕವು 2009ರಲ್ಲಿ ಪೂರ್ಣಪ್ರಜ್ಞಸಂಶೋಧನ ಮಂದಿರದಿಂದ ಮುದ್ರಿತವಾಗಿದೆ. ಇಂದಿಗೆ ಉಪಲಬ್ಧವಾಗದಿರುವದರಿಂದ ಮತ್ತು ಅತ್ಯಪೂರ್ವಾರ್ಥಗರ್ಭಿತ ವಾದ್ದರಿಂದ ಇದನ್ನು ಪುನಃ ಮುದ್ರಿಸಬೇಕೆಂದು ಈ ಗ್ರಂಥದಲ್ಲಿ ಸೇರಿಸಲಾಗಿದೆ.

**ಮಂಕಾಲಿ ಧರ್ಮಾಚಾರ್ಯರು**

ಪ್ರಾಯಃ ಇವರ ಬಗ್ಗೆ ಹೆಚ್ಚಿನ ಪರಿಚಯವು ಉಪಲಬ್ಧವಾಗಿಲ್ಲ. **'ಪರಾಯತಕುಲೋದ್ಭೂತ-ವೇಂಕಟಾಚಾರ್ಯದೇಶಿಕಾನ್'** ಎಂಬ ಇವರ ಆದಿಮಂಗಳಾಚರಣೆಯಿಂದ ಇವರು ಪರಾಯತ ಕುಲೋತ್ಪನ್ನರಾದ ವೇಂಕಟಾಚಾರ್ಯರ ಶಿಷ್ಯರು ಎಂದು ತಿಳಿದು ಬರುತ್ತದೆ. ಇಂತ್ಯದಲ್ಲಿರುವ

'ಮಂಕಾಲಧರ್ಮಪುರಿಣಾ ಶ್ರೀಜನಾರ್ದನಸೂನುನಾ' ಎಂಬ ಶ್ಲೋಕದಿಂದ ಜನಾರ್ದನಸೂರಿಗಳ ಪುತ್ರರು ಇವರು ಎಂದು ತಿಳಿಯುತ್ತದೆ. ಧರ್ಮಪುರಿಯು ಇವರ ವಾಸಸ್ಥಳವಾಗಿತ್ತು. ಇವರು ಅನೇಕ ಉಪನಿಷತ್ತುಗಳಿಗೆ ವ್ಯಾಖ್ಯಾನಿಸಿದ್ದಾರೆ. ಷಟ್ಪ್ರಶ್ನಭಾಷ್ಯಟೀಕೆಗೂ ಇವರು ವಿಸ್ತೃತವಾದ ಸುಂದರವಾದ ವ್ಯಾಖ್ಯಾನವನ್ನು ಬರೆದಿರುವರು. ಇದರಿಂದ ಅವರಿಗಿರುವ ಪಾಂಡಿತ್ಯದ ಆಳವು ಅರ್ಥವಾಗುತ್ತದೆ.

ಇವರ ತಂತ್ರಸಾರವ್ಯಾಖ್ಯಾನವು ಅಪೂರ್ವಾರ್ಥಗರ್ಭಿತವಾಗಿ ಛಲಾರೀ ಆಚಾರ್ಯರ ಶೈಲಿಯನ್ನು ಅನುಕರಿಸುತ್ತದೆ. ಪ್ರಾಯಃ ಅನೇಕಸ್ಥಳಗಲ್ಲಿ ಛಲಾರಿವ್ಯಾಖ್ಯಾನದ ವಾಕ್ಯಗಳನ್ನು ಕಾಣುತ್ತೇವೆ.

**ಬಹುಜ್ಞಬಹುಟೀಕೋಕ್ತತಂತ್ರಸಾರಾರ್ಥಸಂಗ್ರಹಮ್ ।**
**ಕರಿಷ್ಯೇ ಪ್ರೀತಯೇ ವಿಷ್ಣೋಃ ಸನ್ಮನೋಂಬುಜವಾಸಿನಃ ॥**

ಎಂದು ಇವರೆ ಆದಿಯಲ್ಲಿ ತಿಳಿಸಿದಂತೆ ಪೂರ್ವವ್ಯಾಖ್ಯಾನಗಳನ್ನು ಸಂಗ್ರಹಿಸಿ ಬರೆದಿರುವ ವ್ಯಾಖ್ಯಾನವಾಗಿದೆ. ಇದು ಈ ಪೂರ್ವದಲ್ಲಿ ಪ್ರಕಟವಾಗಿರಲಿಲ್ಲ. ಉತ್ತಾರಾದಿಮಠದ ಹಸ್ತಪ್ರತಿ ಸಂಗ್ರಹಾಲದಲ್ಲಿ ಈ ವ್ಯಾಖ್ಯಾನದ ಹಸ್ತಪ್ರತಿಯು ಉಪಲಬ್ಧವಾಯಿತು. ಇದು ಸಹ ಅತ್ಯಂತ ಉಪಕಾರಿಯಾದದ್ದನ್ನು ಕಂಡು ಈ ಗ್ರಂಥದಲ್ಲಿ ಸೇರಿಸಲಾಗಿದೆ.

**ಉಪಸಂಹಾರ**

ತಂತ್ರಸಾರಸಂಗ್ರಹವು ಆಚಾರಕ್ಕೆ ಸಂಬಂಧ ಪಟ್ಟ ಕೃತಿಗಳಲ್ಲಿ ಮೂರ್ಧನ್ಯಕೃತಿ. 'ತಂತ್ರಸಾರ ಸಂಗ್ರಹ'. ಕೇವಲ ಪಾರಾಯಣದಿಂದಲೇ ಸಕಲಾಭೀಷ್ಟವನ್ನು ಸಂಪಾದಿಸುವ ಕಲ್ಪವೃಕ್ಷ. ಈ ಗ್ರಂಥದಲ್ಲಿ ಹೇಳಿದ ವಿಷಯಗಳು ನಿತ್ಯಜೀವನದಲ್ಲಿ ಅನುಷ್ಠಾನಿಸಲೇ ಬೇಕಾದವುಗಳು. ಈ ನಾಲ್ಕು ವ್ಯಾಖ್ಯಾನಗಳಿಂದ ಕೂಡಿದ ಈ ತಂತ್ರಸಾರಸಂಗ್ರಹ ಸಂಪಾದನೆಯ ಕಾರ್ಯವು ನನಗೆ ನನ್ನ ಗುರುಗಳ, ಪೂರ್ವಜರ ಪುಣ್ಯದಿಂದ ಅನುಗ್ರಹದಿಂದ ಲಬ್ಧವಾಗಿದೆ. ಆದಷ್ಟು ಕಾಳಜಿಯನ್ನು ವಹಿಸಿ ಸೂಕ್ಷ್ಮವಾಗಿ ಗಮನಿಸಿ ಅನೇಕ ಮುದ್ರಣದೋಷಗಳನ್ನು ಸರಿಪಡಿಸುವ ಪ್ರಯತ್ನವನ್ನು ಮಾಡಿರುವೆ. ಆದರೂ ಸಹ ಮಾನವಸಹಜ ದೋಷದಿಂದ ಅನವಧಾನದಿಂದ ದೋಷಗಳು ಸಹಜ. ಸಜ್ಜನರು ನೀರಕ್ಷೀರನ್ಯಾಯದಿಂದ ಗುಣಗಳನ್ನು ಗ್ರಹಿಸಿ ದೋಷಗಳನ್ನು ಬಿಟ್ಟು ಅನುಗ್ರಹಸಲಿ ಎಂದು ಪ್ರಾರ್ಥಿಸುವೆ.

ಸಜ್ಜನ ವಿಧೇಯ
**ಪ್ರಹ್ಲಾದಾಚಾರ್ಯ ಜೋಶಿ**

**ಶ್ರೀಗುತ್ತಲಾಚಾರ್ಯಪದಾಬ್ಜಸೇವಿನಾ ಪ್ರಹ್ಲಾದನಾಮ್ನಾ ಕೃತಯಾ ಚ ಸೇವಯಾ ।**
**ಸನ್ಮೋದಸತ್ಯಾತ್ಮಸುತೀರ್ಥವಾಸೀ ಪ್ರೀತೋಽಸ್ತು ಲಕ್ಷ್ಮೀನರಸಿಂಹರೂಪೀ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

# ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ

ಅನಂತಕಲ್ಯಾಣಗುಣಪರಿಪೂರ್ಣ ನಿರ್ದೋಷ ಸಕಲಚೇತನಾಚೇತನಪ್ರಪಂಚಕಾರಣನಾದ ಕುಲದೈವನಾದ ಲಕ್ಷ್ಮೀನರಸಿಂಹ ಹಾಗು ತುಳಜಾಭವಾನಿಯ ಚರಣಾರವಿಂದಗಳಿಗೆ ಭಕ್ತಿ ಶ್ರದ್ಧಾಪೂರ್ವಕವಾದ ಅನಂತ ಸಾಷ್ಟಾಂಗಪ್ರಣಾಮಗಳು.

ಜೀವೋತ್ತಮರಾದ ಮುಖ್ಯಪ್ರಾಣಭಾರತೀದೇವಿಯರ, ಸಕಲತತ್ವಾಭಿಮಾನಿದೇವತಗೆಳ ಚರಣಾರವಿಂದಗಳಿಗೆ ಭಕ್ತಿಪೂರ್ವಕವಾದ ನಮನಗಳು.

ದ್ವೈತವಾಙ್ಮಯಪ್ರಪಂಚವನ್ನು ಟೀಕೆಯಿಂದ ವಿಸ್ತಾರಗೊಳಿಸಿದ ಸರ್ವಜ್ಞಕಲ್ಪರಾದ ಶ್ರೀಮಟ್ಟೀಕಾಕೃತ್ಪಾದರ ಚರಣಕಮಲಗಳಿಗೆ ಭಕ್ತಿಶ್ರದ್ಧಾಪೂರ್ವಕವಾದ ಸಾಷ್ಟಾಂಗ ನತಿತತಿಗಳು.

ಟೀಕಾವಾಕ್ಯದ ಆಂತರ್ಯವನ್ನು ತಿಳಿಯಲು ವ್ಯಾಖ್ಯಾನಗಳ ಸಹಾಯವು ಅವಿಸ್ಮರಣೀಯ. ಈ ತಂತ್ರಸಾರಸಂಗ್ರಹಕ್ಕೆ ಛಲಾರಿ ಆಚಾರ್ಯರು, ಶ್ರೀರಘುನಾಥತೀರ್ಥರು, ವೇಂಕಟಪತ್ಯಾಚಾರ್ಯರು, ಮಂಕಾಲಿ ಧರ್ಮಾಚಾರ್ಯರು ಹೀಗೆ ಅನೇಕ ಮಹನೀಯರು ವ್ಯಾಖ್ಯಾನಿಸಿರುವರು. ಅವರನ್ನು ಉಪಜೀವಿಸದೇ ಆಚಾರ್ಯರ ಗ್ರಂಥಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಕಾರಣ ಆ ಎಲ್ಲ ಮಹನೀಯರ ಚರಣಾರವಿಂದಗಳಿಗೆ ಸಾಷ್ಟಾಂಗಪ್ರಣಾಮಗಳು.

ಶ್ರೀ ಶ್ರೀ 1008 ಶ್ರೀಸತ್ಯಪ್ರಮೋತೀರ್ಥರು ಈ ಶತಮಾನ ಕಂಡ ವಿಭೂತಿ ಪುರುಷರು. ಶ್ರೀಮನ್ನ್ಯಾಯಸುಧಾಪಾಠ ಹಾಗು ಸಂಸ್ಥಾನಪ್ರತಿಮೆಗಳಾದ ಶ್ರೀಮನ್ಮೂಲರಾಮಸೀತಾದೇವಿಯವರ ಅವಿಚ್ಛಿನ್ನ ಪೂಜೆಯು ಅವರ ಉಸಿರು. ಶ್ರೀಶ್ರೀಪಾದಂಗಳವರೇ ನನ್ನನ್ನು ಈ ತತ್ವಜ್ಞಾನಮಾರ್ಗಕ್ಕೆ ಕರೆತಂದವರು. ಅವರ ಪರಮಾನುಗ್ರಹವೇ ಈ ಕೃತಿಯನ್ನು ಸಂಪಾದಿಸಲು ಮುಖ್ಯಕಾರಣ. ಅವರ ಚರಣಾರವಿಂದಗಳಿಗೆ ಭಕ್ತಿಶ್ರದ್ಧಾಪೂರ್ವಕವಾದ ಸಾಷ್ಟಾಂಗಪ್ರಣಾಮಗಳು.

ಶ್ರೀ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥರ 50 ವರ್ಷದ ತಪಸ್ಸಿನ ಸಾಕಾರಮೂರ್ತಿಯೆ ಶ್ರೀ ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು. ವೈರಾಗ್ಯದ ಇನ್ನೊಂದು ಮೂರುತಿ ಶ್ರೀಗುರುಗಳು. ಪಾಂಡಿತ್ಯ, ವಾಕ್ಯಾರ್ಥ, ಪಾಠಗಳು ಸಹಜವಾಗಿ ಬಂದ ಗುಣಗಳು. ಯೌವ್ವನ ವಯಸ್ಸಿನಲ್ಲಿಯೂ ಅನುಭವದ ಪರಾಕಾಷ್ಠತೆ ಗುರುಗಳದ್ದು. ಪ್ರಾಚೀನಪರಂಪರೆಯ ಧರ್ಮದ ಸಂರಕ್ಷಣೆಯ ಧುರಂಧರರು. ಆಧುನಿಕ ಯುವಕರ ದಾರಿದೀಪ. ಗುರುಗಳು ಅನ್ನ ವಿದ್ಯೆಯನ್ನು ನೀಡಿ ಆಶ್ರಯವನ್ನು ಕೊಟ್ಟು ನನ್ನನ್ನು ಸಲುಹಿದವರು. ಸಲಹುತ್ತಿರುವವರು. ಅವರ ಅನುಗ್ರಹ ಶಿಷ್ಯವಾತ್ಸಲ್ಯ ಕಂಡ ನಾನೇ ಧನ್ಯ. ಕೃತಕೃತ್ಯ. ಈ ಗ್ರಂಥಸಂಪಾದನ ಕಾರ್ಯವು ಗುರುಗಳ ಮಂತ್ರಾಕ್ಷತೆಯ ಮಹಿಮೆಯಿಂದಲೇ ಪರಿಪೂರ್ಣವಾಯಿತು. ಅಂಥಹ ಗುರುಗಳ ಚರಣಾರವಿಂದಗಳಲ್ಲಿ ಭಕ್ತಿಶ್ರದ್ಧಾಪೂರ್ವಕವಾದ ಸಾಷ್ಟಾಂಗ ನಮಸ್ಕಾರಗಳು.

ಈ ಕೃತಿಯಲ್ಲಿ ಶ್ರೀರಘುನಾಥತೀರ್ಥರ ವ್ಯಾಖ್ಯಾನವಾದ ತತ್ವಕಣಿಕಾವನ್ನು ಸೇರಿಸಲಾಗಿದೆ. ಇದನ್ನು ಪೂರ್ವದಲ್ಲಿ ಈ ವ್ಯಾಸರಾಜಮಠದ ಪೀಠಾಧಿಪತಿಗಳಾದ, ವಿದ್ವನ್ಮಣಿಗಳಾದ,

